# ಸಿದ್ಧಗಂಗಾ



ಸೆಪ್ಟೆಂಬರ್ 1981

'ಸಿದ್ಧಗಂಗಾ' ಚಿರಾಯುವಾಗಲೆಂದು ಹರಸಿ ಹಾರೈಸಿರುವ
ಆಜೀವ ಸದಸ್ಯರ ಬಳಗಕ್ಕೆ ಕೃತಜ್ಞತೆಗಳು.

860 ಬಿ. ಎಸ್. ದೇವರಾಜ್
ಕ್ಲಾತ್ ಮರ್ಚೆಂಟ್
ವಸಂತನಗರ
ಬೆಂಗಳೂರು-560052

861 ಎಂ. ಎಸ್. ಪರಮಶಿವಪ್ಪ
ಕಾಫಿ ಪ್ಲಾಂಟರ್
ರೇಣುಕಾ ಎಸ್ಟೇಟ್
ಬೇಲೂರ್ ತಾಲ್ಲೂಕ್
ಹಾಸನ ಜಿಲ್ಲೆ.

862 [illegible]. ಎಸ್. [illegible]ಯ್ಯ
ಶಿಕ್ಷಕರು, ಕಂಡಿಕೆರೆ,
S S R H. S
ಚಿಕ್ಕನಾಯ್ಕನಹಳ್ಳಿ ತಾಲ್ಲೂಕ್
ತುಮಕೂರು ಜಿಲ್ಲೆ.

863 ಮಲ್ಲಯ್ಯ, ಅರ್ಚಕರು,
ಬಸವೇಶ್ವರ ದೇವಸ್ಥಾನ
ಮಾಗಡಿ ಟೌನ್
ಬೆಂಗಳೂರು ಜಿಲ್ಲೆ.

864 ಬಿ. ಚನ್ನರಸಪ್ಪ, ಮರ್ಚೆಂಟ್,
ಗಾಂಧಿ ಸರ್ಕಲ್
ವಿಜಯಪುರ
ಬೆಂಗಳೂರು ಜಿಲ್ಲೆ.

865 ವಿ. ಎಸ್. ಪಾಟೀಲ್, BE AMIE
ಸೂಪರಿಂಟೆಂಡೆಂಟ್ ಇಂಜಿನಿಯರ್
ಹಿಡಕಲ್ ಡ್ಯಾಮ್
ಹುಕ್ಕೇರಿ ತಾಲ್ಲೂಕ್
ಬೆಳಗಾಂ ಜಿಲ್ಲೆ.

866 ಎಚ್. ಆರ್. ಮಹದೇವಪ್ಪ
ನಂ. 683 2 ನೇ ಬ್ಲಾಕ್
ರಾಜಾಜಿನಗರ
ಬೆಂಗಳೂರು 560010

867 ಬಿ. ಎಸ್. [illegible]ಪ್ಪ
12 ನೇ ಮುಖ್ಯ ರಸ್ತೆ
ರಾಜಾಜಿನಗರ 2 ನೇ ಬ್ಲಾಕ್
ಬೆಂಗಳೂರು 560010

868 ಎಚ್. ಕೆ. ಸಿದ್ಧಲಿಂಗಯ್ಯ,
[illegible]ಹಳ್ಳಿ
ದೊಂಬರಹಳ್ಳಿ ಅಂಚೆ
ತುರುವೇಕೆರೆ ತಾಲ್ಲೂಕ್.

869 ಕೆ. ಎಸ್. ಶಿವರುದ್ರಯ್ಯ,
MA. BEd.,
[illegible]ಹಳ್ಳಿ, [illegible] ಅಂಚೆ
ತುಮಕೂರು ತಾಲ್ಲೂಕು.

# ಸಿದ್ಧಗಂಗಾ

ಸಂಪುಟ–೧೭ ಸಂಚಿಕೆ - ೯ ಸೆಪ್ಟಂಬರ್, ೧೯೮೦

ಭವಾಂಬೋಧಿನಾವಂ ಸದಾಶುದ್ಧಭಾವಂ
ಶಿವಂ ಶಾಂತಮೇಕಂ ಪರಿತ್ರಾತಲೋಕಂ ।
ಶಿವಾನಂದಲಿಂಗಂ ಶಿವಾದ್ವೈತಲಿಂಗಂ
ಪರಬ್ರಹ್ಮ ಲಿಂಗಂ ಭಜೇಸಿದ್ಧಲಿಂಗಂ ॥

★ ★ ★

ಮರ್ತ್ಯ ಲೋಕದ ತುಂಬ ಭಕ್ತಿ ಬೆಳಕನು ಹರಡಿ
ಸಕಲ ಜೀವಾತ್ಮರಿಗೆ ಲೇಸನೇ ಬಯಸಿ
ಅನುಪಮಾದರ್ಶ ಮಹಾಮನೆಯ ಅಂಗಳದಿ
ಅನುಭಾವಿಗಳ ಜೊತೆ ಗೋಷ್ಠಿಯನು ನಡೆಸಿ
ಅಕ್ಕಗಳ ಅಯ್ಯಗಳ ಅಣ್ಣಗಳ ಜೊತೆಗೂಡಿ
ನುಡಿಕುಡಿಯ ತುದಿಗೆ ವಚನ ಜ್ಯೋತಿಯ ಹಚ್ಚಿ
ಅನುಭಾವ ಸಾಹಿತ್ಯ ರಸಗಂಗೆಯನೀಂಟಿ
ಪರಮ ದಾಸೋಹಿ ನೀ ಜಗವ ಪೊರೆದೆ

ಲಿಂಗ ಭೇದವ ಅಳಿಸಿ, ಸರ್ವ ಸಮತೆಯ ಬರೆದೆ
ಮನುಜ ಕುಲ ಒಂದೆನುತ ಸಂಘಟನೆ ಗೈದೆ
ಮೊದಲ ಕನ್ನಡ ಸಂಘ ನಿನ್ನ ಮನೆಯಲಿ ಸೇರಿ
ಜಗಕ್ಕೆಲ್ಲವಾಧಾರ ಲಿಂಗತತ್ತ್ವವನರುಹಿ
ಕಾಯಕವೆ ಕೈಲಾಸ ಎಂದು ಘೋಷಿಸಿ ನುಡಿದು
ಕೂಡಲಾ ಸಂಗಮದಿ ನದಿಯಾಗಿ ಹರಿದೆ

—ಬಿ. ವೀರಭದ್ರಯ್ಯ

# ಈ ಸಂಚಿಕೆಯಲ್ಲಿ



### ಚಂದಾದಾರರಲ್ಲಿ ವಿನಂತಿ

1981 ನೆಯ ವರ್ಷದ ಚಂದಾ ನಂಬರ್ ಗುರುತಿಸಿಕೊಳ್ಳಿ. ವಿಳಾಸ ಬದಲಾವಣೆ ಮುಂತಾದ ವಿಚಾರಗಳಲ್ಲಿ ನಮ್ಮೊಡನೆ ವ್ಯವಹರಿಸುವಾಗ, ತಮ್ಮ ಚಂದಾ ನಂಬರ್ ಮತ್ತು ನಮ್ಮ ಪ್ರತಿನಿಧಿಗಳ ಹೆಸರನ್ನು ಬರೆಯುವುದನ್ನು ಮರೆಯಬೇಡಿ. ಚಂದಾ ಬಾಕಿಇರುವವರು ಸಂದಾಯಮಾಡಿ, ಸದಸ್ಯತ್ವವನ್ನು ಮುಂದುವರಿಸಿಕೊಂಡು 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿರಿ. ಸಿದ್ಧಗಂಗಾ ತರಿಸಿಕೊಳ್ಳುವಂತೆ ತಮ್ಮ ಬಂಧು ಮಿತ್ರರು ಮತ್ತು ಹಿತೈಷಿಗಳನ್ನು ಪ್ರೋತ್ಸಾಹಿಸಿ.



# ಶ್ರೀವಾಣಿ

'ಸಾಹಿತ್ಯ, ಸಮಾಜದ ಕೈಗನ್ನಡಿ; ಸಮಾಜದ ಶುದ್ಧೀಕರಣ ಅದರ ಪ್ರಧಾನ ಪ್ರಯೋಜನ.' ಈ ಮಾತು ಜನಪದ ಸಾಹಿತ್ಯಕ್ಕಂತೂ ಸುಪುಷ್ಟ ಅನ್ವಯ. ಸಮಾಜ ಅಳಿವಿನ ಹಾದಿ ತುಳಿದಿರುವ ಇಂದಿನ ದುಃಸ್ಥಿತಿಯಲ್ಲಿ ಇದು ಹಲವಾರು ಜಟಿಲ ಸಮಸ್ಯೆಗಳಿಗೆ ಪರಿಹಾರ ಒದಗಿಸಬಲ್ಲುದು. ನಮ್ಮ ಮುಗ್ಧಹಳ್ಳಿಗರ ಅನುಭವ ಪೂರಿತ ಹೃದಯಾಂತರಾಳದಿಂದ ಉದಿಸಿದ ಈ ಸಾಹಿತ್ಯ ಜನರನ್ನು ಮೇಲೆತ್ತುವ ಮತ್ತು ಎಚ್ಚರಿಸುವ ಉತ್ತಮ ಸಾಧನವಾಗಿದೆ. ಅಂತೆಯೇ ಶುದ್ಧ ಮನೋಭಾವವುಳ್ಳವರ ಮೇಲೆ ಅಗಾಧ ಪ್ರಭಾವ ಬೀರಿದೆ. ಸುಸಂಸ್ಕೃತ ಜನಾಂಗವನ್ನು ಸೃಷ್ಟಿಸುವ ಶಕ್ತಿಯನ್ನು ಹೊಂದಿದೆ: ಓರ್ವ ತಾಯಿ ತನ್ನ ಮುದ್ದು ಮಗನನ್ನು ತೊಡೆಯೇರಿಸಿಕೊಂಡು ಅದರ ಮುಗ್ಧ ಮನೋಭೂಮಿಕೆಯಲ್ಲಿ ನೀತಿ ಬೀಜವನ್ನು ಬಿತ್ತುತ್ತಾಳೆ: 'ಆಚಾರಕ್ಕರಸಾಗು, ನೀತಿಗೆ ಪ್ರಭುವಾಗು, ಮಾತಿನಲಿ ನೀ ಚೂಡಾಮಣಿಯಾಗು; ಜಗಕ್ಕೆಲ್ಲ ಬೆಳಕಾಗು, ಕಣ್ಣಾಗು;.... ಈ ಉದಾಹರಣೆಗಳು ನೂರಾರು ಸಾವಿರಾರು. ಇಂಥ ಉತ್ತಮ ಸಾಹಿತ್ಯದ ಪ್ರಚಾರ-ಪ್ರಸಾರ ದೇಶದಲ್ಲಿಂದು ಅವಶ್ಯ ಆಗಬೇಕಾಗಿದೆ. ತನ್ಮೂಲಕ ನಮ್ಮ ಸಂಸ್ಕೃತಿಯ ಅರಿವು, ಉತ್ತಮ ಬಾಳ್ವೆಮಾಡುವ ರೀತಿ - ನೀತಿಗಳು ಜನತೆಯಲ್ಲಿ ಮೂಡಿಬರುವಂತಾಗಬೇಕು. ಅದಾದಾಗ ಮಾತ್ರ ಜನಪದ ಸಾಹಿತ್ಯಕ್ಕೊಂದು ನೆಲೆ-ಬೆಲೆ ಬಂದೀತು. ರಾಷ್ಟ್ರಕ್ಕೊಂದು ಶುಭದ ಸೆಲೆ ಸಿಕ್ಕೀತು.

**"ಸಿದ್ಧಗಂಗಾ" ಮಾಸ ಪತ್ರಿಕೆ**

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ,
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

**ಸಂಪಾದಕ ಮಂಡಲಿ**
ಪಂ॥ ಚನ್ನಪ್ಪ ಎರೇಶೀಮೆ
ಪಿ. ಎನ್. ಚಂದ್ರಶೇಖರಯ್ಯ
ಬಸವರಾಜು

ಜಾಹಿರಾತು ಕಾರ್ಯದರ್ಶಿ
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

**ಚಂದಾ ವಿವರ**
ಅಜೀವ ಸದಸ್ಯತ್ವ 151-00 ರೂ
ವಾರ್ಷಿಕ ಚಂದಾ 12 00 ರೂ

ಪ್ರಕಾಶಕರು
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ—572104
ತುಮಕೂರು ಜಿಲ್ಲೆ.


## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ, ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೇ ಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರೆಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



# ಸಂಪಾದಕೀಯ

ಶ್ರೀ ಸಿದ್ಧಗಂಗಾ ಕ್ಷೇತ್ರವು ಅನೇಕ ಶಿವಯೋಗಾನಿಷ್ಠ ಗರಿಷ್ಠ ಯತಿ ಪುಂಗವರ ತಪೋಭೂಮಿ. ಈ ಮಹಾಮಠದ ಪವಿತ್ರವಾತಾವರಣವನ್ನು ಪ್ರವೇಶಿಸಿದೊಡನೆಯೇ ಎಂಥವರನ್ನೂ ಶಿವಭಾವಾಪನ್ನರಾಗಿಸಿ, ಗುರುಲಿಂಗ ಜಂಗಮ ಸೇವಾಕಾಂಕ್ಷೆಯ ಸಂಸ್ಕಾರ ಭಾವನೆಯನ್ನು ಉಂಟುಮಾಡುತ್ತದೆ. ಅವರ್ಣನೀಯ ಆನಂದವನ್ನುಂಟುಮಾಡಿ ತಲೆ ಬಾಗಿ ನಮಸ್ಕರಿಸುವಂತೆ ಮಾಡುವ ಪುಣ್ಯಪ್ರಭಾವ ಅನೇಕರಿಗುಂಟಾಗಿದ್ದರೆ ಅತಿಶಯೋಕ್ತಿ ಎನಿಸಲಾರದು. ಶ್ರೀ ಕ್ಷೇತ್ರದಲ್ಲಿ ನಡೆಯುವ ಒಂದೊಂದು ಕಾರ್ಯದ ಹಿಂದೆಯೂ ಅಗಾಧ ಶಿವಸಂಕಲ್ಪ ಶಕ್ತಿಯ ಪ್ರಭಾವ ಅಡಗಿದೆ. ಅಘಟನ ಘಟನಾ ಶಕ್ತಿಯ ಮಹಾ ತಪಸ್ವಿಗಳ ಶಿವಯೋಗದ ಫಲ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು 3-3-1930 ರಂದು ಶ್ರೀ ಕ್ಷೇತ್ರದ ಉತ್ತರಾಧಿಕಾರಿಗಳಾಗಿ ಆಯ್ಕೆಗೊಂಡದ್ದು. ಅಂದಿನಿಂದ ಇಂದಿನವರೆವಿಗೆ "ಸರ್ವೇ ಜನಾಃ ಸುಖಿನೋ ಭವಂತು" ಎಂಬ ದಿವ್ಯ ಮಂತ್ರವನ್ನುಚ್ಛರಿಸುತ್ತ ತ್ರಿಕರಣ ಪೂರ್ವಕ ಅನುಷ್ಠಾನಗೈದ ಕಾಯಕ ಯೋಗಿಗಳು. ಅವರ ಶಿವಯೋಗ ನಿಷ್ಠೆ, ಹಾಗೂ ಲಿಂಗ ತಪಸ್ಸುಗಳ ದಿವ್ಯ ಫಲವೇ ನಿಂತ ನೆಲಕ್ಕೆ ಬೆಲೆ. ಆ ಪುಣ್ಯ ಪುರುಷರ ನಿಷ್ಕಾಪಟ್ಯ ಲಿಂಗತಪಸ್ಸಿನ ಜಲಧಾರಾವರ್ಷ ಪ್ರಭಾವವೇ ಶ್ರೀ ಕ್ಷೇತ್ರದ ಔನ್ನತ್ಯ ಮತ್ತು ವೈಶಾಲ್ಯತೆಗೆ ಕಾರಣ. ಹೀಗಾಗಿ ನಾಡಿನ ಸರ್ವತೋಮುಖವಾದ ಅಭಿವೃದ್ಧಿಗೆ 50 ವರ್ಷಗಳ ನಿರಂತರ ಕರ್ಮ ಯೋಗದ ಭವ್ಯ ಇತಿಹಾಸವಿದೆ. ಅನೇಕ ಅಡ್ಡಿ ಆತಂಕಗಳು ಕಷ್ಟ ನಿಷ್ಠೂರಗಳು ಗುಡ್ಡದಂತೆ ಬಂದು ಮಂಜಿನಂತೆ ಕರಗಿಹೋದ ಸೋಲಲರಿಯದ ಸಾಹಸದ ಚರಿತ್ರೆಯಿದೆ. ತತ್ಫಲವಾ ಸಹಸ್ರಾರು ಭಕ್ತಭಾವುಕರು, ಶಿಷ್ಯಕೋಟಿಗಳಿಗೆ ಮೇರೆಯಿಲ್ಲವಾಗಿದೆ. ಶ್ರೀ ಶ್ರೀಗಳವರ ಕೃಪಾಶೀರ್ವಾದ ಪ್ರಭಾವಕ್ಕೊಳಗಾದ ಅಪಾರ ಭಕ್ತವೃಂದದವರು ಸುವರ್ಣ ಮಹೋತ್ಸವ ಮತ್ತು ಶಿವ ಯೋಗ ನಿರ್ಮಾಣ ಗದ್ದುಗೆ ಕಾರ್ಯದಲ್ಲಿ ನಿರತರಾಗಿರುವುದು ಕೃತಜ್ಞತಾ ಸಮರ್ಪಣೆಗೆ ಜ್ವಲಂತ ಸಾಕ್ಷಿಯಾಗಿದೆ. ಶ್ರೀ ಶ್ರೀಗಳವರ ಮಹತ್ತು ಬೃಹತ್ತುಗಳಿಗೆ ಅನುಗುಣವಾಗಿ ಆಚರಿಸಬೇಕೆಂಬ ಸತ್ ಸಂಕಲ್ಪ ಸುತ್ಯಾತ್ಯಾರ್ಹವಾದುದು. ಅನೇಕ ದಾನಿಗಳು ಮುಂದೆ ಬಂದಿರುವುದು ಶುಭ ಸೂಚಕ. ಕೊಡುಗೈ ಕಲಿಗಳ ಉದಾರ ಕೊಡುಗೆಯ ಮುಂದೆ ಅಸಾಧ್ಯವೇನಿದೆ ಅವರ ಮನಸ್ಸು ದೊಡ್ಡದು. ಸಮಸ್ತ ಭಕ್ತ ಸಮೂಹಕ್ಕೆ ಶ್ರೀ ಶ್ರೀಗಳವರ ಕೃಪಾಶೀರ್ವಾದದ ವಜ್ರ ರಕ್ಷೆಯಿರಲೆಂದು ಆಶಿಸುತ್ತೇವೆ.

# ನವನೀತ

ಆಧಿವ್ಯಾಧಿಸಮಾಯುಕ್ತಂ ಜೀವಿತಾಶಾಸಮುತ್ಸುಕಂ ।
ಕಾಲೋ ಬಲೀಯಾನಹಿವದ ಜ್ಞಾತಃ ಪ್ರತಿಪದ್ಯತೇ ॥

—ಗರುಡಪುರಾಣ

ಚಿಂತೆಯಿಂದಲೂ, ರೋಗದಿಂದಲೂ ನೊಂದು ಬದುಕಬೇಕೆಂಬ ಆಸೆಯಿಂದ ತುಂಬಿದವನ ಮೇಲೆ ಬಲಿಷ್ಠವಾದ ಮೃತ್ಯುವು ಹಾವಿನಂತೆ ತಿಳಿಯದ ಹಾಗೆ ಮೇಲೆರಗುತ್ತದೆ.

○ ○ ○

ಅಯಾಚಿತಃ ಸುಖಂದತ್ತೇ ಯಾಚಿತಶ್ಚ ನ ಯಚ್ಛತಿ ।
ಸರ್ವಸ್ವಂ ಚಾಪಿ ಹರತೇ ವಿಧಿರುಚ್ಛೃಂಖಲೋ ನೃಣಾಮ್ ॥

—ರಸಗಂಗಾಧರ

ಬೇಡದಾಗ ವಿಧಿಯು ಸುಖವನ್ನು ಕೊಡುತ್ತಾನೆ. ಬೇಡಿದಾಗ ಕೊಡುವುದಿಲ್ಲ. ಅಷ್ಟೇ ಅಲ್ಲ, ಜನರ ಸರ್ವಸ್ವವನ್ನು ಅಪಹರಿಸಿಬಿಡುತ್ತಾನೆ. ವಿಧಿಯು ಯಾರ ನಿಯಮಕ್ಕೂ ಒಳಪಡದ ಸ್ವೇಚ್ಛಾಚಾರಿ.

○ ○ ○

ಇಹ ಯತ್ ಕ್ರಿಯತೇ ಕರ್ಮ ಪರತ್ರೈವೋಪಭುಜ್ಯತೇ ।
ಸಿಕ್ತಮೂಲಸ್ಯ ವೃಕ್ಷಸ್ಯ ಫಲಂ ಶಾಖಾಸು ದೃಶ್ಯತೇ ॥

—ಸುಭಾಷಿತ ಸುಧಾನಿಧಿ

ಇಲ್ಲಿ ಯಾವ ಕರ್ಮ ಮಾಡುವನೋ ಅದನ್ನೇ ಪರಲೋಕದಲ್ಲಿ ಅನುಭವಿಸುವನು. ಮರದ ಬೇರಿಗೆ ನೀರೆರೆದರೆ ಮರದ ಹಣ್ಣುಗಳು ಕೊಂಬೆಗಳಲ್ಲಿ ಕಾಣಿಸಿಕೊಳ್ಳುತ್ತವೆ.



# ಚಿಂತನ

—ಟಿ. ಆರ್. ಮಹಾದೇವಯ್ಯ

**ಪೂಜೆ** :—ಜಗತ್ತಿನ ಎಲ್ಲ ಧರ್ಮಗಳೂ ಮಾನವನ ಮನಸ್ಸಿನ ಸಂಸ್ಕಾರಕ್ಕಾಗಿ ಕೆಲವು ಆಚಾರಸಂಹಿತೆಗಳನ್ನು ಮುಂದಿಟ್ಟಿವೆ. ಆಚಾರ-ವಿಚಾರ, ವ್ರತ-ನಿಯಮಗಳು ಏಕೆ ? ಮನಸ್ಸನ್ನು ಸಂಸ್ಕರಿಸಿಕೊಳ್ಳಲು. ದೇಹವನ್ನು ದಣಿಸುವುದು, ಮನಸ್ಸನ್ನು ತಣಿಸಲು ಮಾತ್ರ ಅದು ಸಿದ್ಧಿಸದಿದ್ದರೆ ವ್ರತಗಳಿಗೂ ಅರ್ಥವಿಲ್ಲ ; ದೇಹದಂಡಣೆಗೂ ಅರ್ಥವಿಲ್ಲ.

ಪೂಜೆ ಮನುಷ್ಯನನ್ನು ಅಂತರ್ಮುಖಿಯನ್ನಾಗಿಮಾಡುವ ಮಹತ್ವದ ಸಾಧನ. ದುರ್ದೈವವೆಂದರೆ ಈ ಅಮೂಲ್ಯ ಸಾಧನಕ್ಕೆ ಯಾಂತ್ರಿಕತೆ ಹಾಗೂ ಡಾಂಭಿಕತೆಗಳು ಶಾಪವಾಗಿ ಪರಿಣಮಿಸಿವೆ. ಲೋಕ ಮೆಚ್ಚಲೆಂದು ಮಾಡುವ ಆಡಂಬರದ ಪೂಜೆ, ಅಂತರಂಗ ಶುದ್ಧವಿಲ್ಲದೆ, ಚಂಚಲಮನದಿಂದ ಮಿಂದೆವೆಂದು ಗಡಗಡನಡುಗುತ್ತ, ಕಂಚುಗಾರರ ಅಂಗಡಿಯಂತೆ ಮಿರುಗುವ ಪ್ರತಿಮೆಗಳನಿಟ್ಟು, ಮಂತ್ರ-ತಂತ್ರಗಳ ಆರ್ಭಟದಿಂದ, ಘಂಟೆಯ ಝುಣತ್ಕಾರದಿಂದ ಮಾಡುವ ಪೂಜೆ ಪೂಜೆಯೆ ? ಅದು 'ಪೂಜಿ' ಮಾತ್ರ.

ಮಿಂದು ಮಡಿಯುಡುವುದು ಅಂತರಂಗಶುದ್ಧಿಗೆ ಸಾಧಕವಾಗಬೇಕು. ಭೌತಿಕ ಶುದ್ಧಿ ಮಾನಸಿಕ ಶುದ್ಧತೆಗೆ ಅನುವು ಮಾಡಬೇಕು. ಅಂದರೆ ಮಡಿಗಿಂತ, ಮಡಿಯಿಂದ ಉಂಟಾಗಬೇಕಾದ ಮಾನಸಿಕ ಪರಿಪಾಕ ಮುಖ್ಯವೆಂದಂತಾಯಿತು. ಪೂಜೆಯಿಂದ ದೊರೆಯುವ ಪರಿಶುದ್ಧತೆ ಹಾಗೂ ಪ್ರಸನ್ನತೆಗಳು ಬಾಳಿಗೆ ಅಗತ್ಯವಾದ ಕೆಚ್ಚು-ನಚ್ಚನ್ನು ಸಮಚಿತ್ತತೆಯನ್ನು ಒದಗಿಸಬೇಕು. ಆದರೆ ನಾವು ಮಡಿಗೆ ಪೂಜಾ ಸಂಭ್ರಮಕ್ಕೆ ಕೊಟ್ಟಷ್ಟು ಪ್ರಾಧಾನ್ಯತೆಯನ್ನು ಅದರಿಂದ ಒದಗಬೇಕಾದ ಮಾನಸಿಕ ಸಂಸ್ಕಾರದ ಕಡೆಗೆ ಕೊಡುವುದು ಕಾಣಿಸುತ್ತಿಲ್ಲ. ತಿರುಳನ್ನೆಸೆದು ಕರಟವನ್ನೇ ಆದರಿಸುತ್ತಿದ್ದೇವೇನೋ ಎನ್ನಿಸುತ್ತದೆ. 'ದಾರಿಗೈ ಊರಲ್ಲ' ಕನ್ನಡಗಾದೆಯೊಂದು ಹೇಳುತ್ತದೆ. ಊರಿಗೆ ದಾರಿ ತೋರಿಸುತ್ತ ನಿಂತುಕೊಂಡ ಕೈಮರವೇ ಊರಾಗಲು ಸಾಧ್ಯವಿಲ್ಲ. ಅದು ತೋರಿಸುವತ್ತ, ನಿರ್ದಿಷ್ಟ ಮಾರ್ಗ ಸಾಗಬೇಕು. ಆಚಾರ ಸಂಹಿತೆಯನ್ನು ಉರುಹೊಡೆದು ಪಾಠ ಒಪ್ಪಿಸಿದರೆ ಪ್ರಯೋಜನವಿಲ್ಲ. ಅದ

( 52 ನೇ ಪುಟ ನೋಡಿ )

# ಕ್ಷೇತ್ರ ವಾರ್ತೆ

—ಪಿ. ಎಸ್. ಚಂದ್ರಶೇಖರಯ್ಯ

ದಿನಾಂಕ 27-8-81 ರ ಶುಕ್ರವಾರದಂದು ಶ್ರೀ ಕ್ಷೇತ್ರದಲ್ಲಿ ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ಶಿವಯೋಗ ಸಮಾಧಿ ಗದ್ದುಗೆ ನಿರ್ಮಾಣದ ಶಂಕುಸ್ಥಾಪನಾ ಮಂಗಳ ಮಹೋತ್ಸವ ಸಮಾರಂಭವು ನೆರವೇರಿತು. ಶಂಕುಸ್ಥಾಪನೆಯು ಕಾಲಕ್ಕೆ ಸರಿಯಾಗಿ ಕನಕಪುರದ ದೇಗುಲ ಮಠಾಧ್ಯಕ್ಷರಾದ ಚರಮೂರ್ತಿ ಶ್ರೀ ಶ್ರೀ ಮಹಾಲಿಂಗ ಮಹಾ ಸ್ವಾಮಿಗಕವರ ಅಮೃತ ಹಸ್ತದಿಂದ ವಿದ್ಯುಕ್ತವಾಗಿ ಜರುಗಿತು. ಸಮಾರಂಭಕ್ಕೆ ನಾಡಿನ ಹಲವು ಮಠದ ಮಠಾಧಿಪತಿಗಳು ಭಾಗವಹಿಸಿದ್ದರು. ವಿವಿಧ ಮೂಲೆಯಿಂದ ಅನೇಕ ಅಭಿಮಾನೀ ಭಕ್ತವೃಂದದವರು ಆಗಮಿಸಿದ್ದರು. ಸಮಾರಂಭದಲ್ಲಿ ಬೆಂಗಳೂರಿನ ಬೇಲೀಮಠದ ಶ್ರೀ ಶ್ರೀ ಶಿವರುದ್ರ ಸ್ವಾಮಿಗಳವರು ಸಭೆಯನ್ನು ಕುರಿತು ಆಶೀರ್ವದಿಸುತ್ತ, ಪರಮಪೂಜ್ಯ ಶ್ರೀ ಶ್ರೀಗಳವರ ದರ್ಶನಭಾಗ್ಯ ದೊರೆತದ್ದು ನಮ್ಮ ಪುಣ್ಯ. ಜ್ಞಾನಿಗಳ, ಸಂತರ, ಸತ್ಪುರುಷರ ಕಾಲದಲ್ಲಿ ಅದರಲ್ಲೂ ಅವರ ದರ್ಶನ ಸ್ಪರ್ಶನ, ಉಪದೇಶಾದಿಗಳನ್ನು ಕೇಳುವ ಸುಯೋಗ ದೊರೆಯುವುದು ಪೂರ್ವಜನ್ಮದ ಸುಕೃತ. ನಿಜಕ್ಕೂ ನಮ್ಮ ಜೀವನ ಕೃತಕೃತ್ಯವಾಯಿತು. ಪೂಜ್ಯರು ಮಾಡಿರುವ ಸೇವಾಭಾಗ್ಯದ ವರ್ಣನೆಯು ಅಸದಳ. ಅವರ ಆಶೀರ್ವಾದ ಎಂದೆಂದೂ ದೊರಕುವಂತೆ ನಮ್ಮ ಕಣ್ಮುಂದೆ ದಿವ್ಯಚೈತನ್ಯ ರೂಪವಾಗಿ ಬೆಳಗಲೆಂಬುದರ ಸಂಕೇತ ಇಂದಿನ ಶಿವಯೋಗ ಸಮಾಧಿಯ ನಿರ್ಮಾಣ ಕಾರ್ಯವೆಂದರು. ಸಭೆಯನ್ನುದ್ದೇಶಿಸಿ ಶಾಸಕರಾದ ಶ್ರೀ ವಿ. ಎಲ್. ಶಿವಪ್ಪನವರೂ, ಲೋಕವಾಣಿ ಸಂಪಾದಕರಾದ ಶ್ರೀ ಎಸ್. ಮಹಾದೇವ ಪ್ರಕಾಶರವರೂ ಮಾತನಾಡಿದರು. ಶ್ರೀ ಜಿ. ಎಸ್. ಬಸವರಾಜುರವರು ಮಕ್ಕಳ ಕಾರ್ಯಕ್ಕಾಗಿ ತಾಯಿಯವರ ಹೆಸರಿನಲ್ಲಿ 25 ಸಾವಿರ ರೂಪಾಯಿಗಳು ಮತ್ತು ಮಲೆನಾಡಿನ ಶ್ರೀ ನಂಜಪ್ಪಗೌಡರು ಸುಮಾರು 4-5 ಲಕ್ಷದ ಬೆಲೆಬಾಳುವ ಒಂದು ಸೈಟನ್ನು ಕೊಡವುದಾಗಿ ವಾಗ್ದಾನ ಮಾಡಿದರು. ಶ್ರೀ ಕ್ಷೇತ್ರದ ಕಿರಿಯ ಸ್ವಾಮೀಜಿಯವರು ತಮ್ಮ ಪೂಜ್ಯ ಗುರುಗಳ ಸೇವೆಯನ್ನು ಪ್ರಶಂಸಿಸಿದರು. ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಕನಕಪುರ ದೇಗುಲ ಮಠದ ಶ್ರೀ ಶ್ರೀಗಳವರು ಪೂಜ್ಯರ ಅಗಾಧ ಸೇವಾ ಶಕ್ತಿ ಸಾಮರ್ಥ್ಯದ ಬಗ್ಗೆ ಹೃದಯ ತುಂಬಿ ಕೊಂಡಾಡಿದರು. ಪೂಜ್ಯರು ಒಂದು ಶತಮಾನ ಪೂರ್ತಿ ದೀರ್ಘಾಯುಗಳಾಗಿ ನಮ್ಮನ್ನೆಲ್ಲಾ ಆಶೀರ್ವದಿಸುತ್ತಿರಲೆಂದು ನಾವೆಲ್ಲರೂ ಭಗವಂತನನ್ನು ಪ್ರಾರ್ಥಿಸೋಣ ಎನ್ನುತ್ತ ಸಮಸ್ತ ಭಕ್ತವೃಂದಕ್ಕೂ ಆಶೀರ್ವದಿಸಿದರು. ಸಭೆಯು ಮಂಗಳದೊಡನೆ ಮುಕ್ತಾಯವಾಯಿತು.





# ಉದ್ಧಾನ ಶಿವಯೋಗಿಗಳವರ ಅಧ್ಭುತ ಘಟನೆಗಳು

೨

—ಪಂ. ಚನ್ನಪ್ಪ ಎರೇಸೀಮೆ

ರಾಮಲಿಂಗೇಶ್ವರ ಬೆಟ್ಟದಲ್ಲಿರುವ ದೊಡ್ಡ ಸಿದ್ದಪ್ಪನ ಗವಿಗೆ ಉದ್ದಾನಶಿವಯೋಗಿಗಳು ಮನಸ್ಸು ಬಂದಾಗಲೆಲ್ಲ ಹೋಗಿ ಬರುತ್ತಿದ್ದರು. ಆ ಗವಿಯಿರುವುದು ಮಠದಿಂದ ಸುಮಾರು ಎರಡು ಎರಡುವರೆ ಮೈಲಿಗಳ ಅಂತರದಲ್ಲಿ. ರಾಮಂಲಿಗೇಶ್ವರನ ಬೆಟ್ಟದ ಮಧ್ಯಭಾಗದ ದಟ್ಟಡವಿಯಲ್ಲಿ. ಅಲ್ಲಿಗೆ ಎರಡು ಕಾಲು ದಾರಿಗಳುಂಟು ಒಂದು ದಾರಿ ಸಿದ್ಧಗಂಗಾ ಬೆಟ್ಟದ ತಪ್ಪಲಿನಿಂದ ನೇರವಾಗಿ ಬೆಟ್ಟದಲ್ಲಿಯೇ ಹಾದು ಹೋಗುವುದು ಇದು ಸ್ವಲ್ಪ ಸಮೀಪ, ಸುಮಾರು ಒಂದು ಒಂದುವರೆ ಮೈಲಿಯಾದೀತು. ಇನ್ನೊಂದು ರಾಮಲಿಂಗನ ಬೆಟ್ಟವನ್ನು ಬಳಸಿ ಅವರ ಪೂರ್ವಾದಿಗ್ಭಾಗದಿಂದ ಬೆಟ್ಟವನ್ನೇರಿ ಹೋಗುವುದು, ಇದೇ ಬಳಸಿನದು. ಉದ್ಧಾನಶಿವಯೋಗಿಗಳು ಸಿದ್ಧಗಂಗಾಬೆಟ್ಟದ ತಪ್ಪಲಿನಿಂದ ಸಮೀಪದ ದಾರಿಯಿಂದಲೇ ಬಂದು ಅಮಾವಾಸ್ಯೆಯ ದಿನ ಹೊರಟರು. ಅವರ ಶಿವಪೂಜಾಮರಿ ‘ ಬಾಳಪ್ಪ ’ ಎಂಬುವವನಿದ್ದನು.

ಸ್ವಾಮಿಗಳವರ ಆಪ್ತ ವ್ಯಕ್ತಿ ಆತ. ಸ್ವಾಮಿಗಳು ಮುಂದೆ ಮುಂದೆ ಹೋದಂತೆಲ್ಲ ಕತ್ತಲಲ್ಲಿ ಅವರಿಗೆ ಕಾಣದಂತೆ ಈತನೂ ಹೊರಟ ಇನ್ನೇನು ಗವಿ ಸಮೀಪದಲ್ಲೇ ಬಂದಿತು. ಆಗ ಒಂದು ಧ್ವನಿ ಮನುಷ್ಯ ಸಂಗಾತವೇತಕ್ಕೆ ಎಂದು ಬಂತು. ಉದ್ದಾನಪ್ಪನವರು ಹಿಂದಕ್ಕೆ ಹೊರಳಿ ನೋಡಿದರು. ಹಿಂದೆ ಬೀಳುತ್ತೇಳುತ್ತಾ ಬಾಳಪ್ಪ ಬರುತ್ತಿದ್ದ. ‘ ಬಾಳಪ್ಪ ನೀನೇಕೆ ಬಂದೆ ಹಿಂದಕ್ಕೆ ಹೊರಡು. ’ ಎಂದು ಒಂದು ಬಾಳೆಹಣ್ಣು, ಕೊಟ್ಟು ಕಳಿಸಿದರಂತೆ. ಬಾಳಪ್ಪನೂ ಆದಷ್ಟು ಧೈರ್ಯಶಾಲಿಯೇ ಅದರೂ ಹಿಂದಕ್ಕೆ ಬರದೆ ಸ್ವಾಮಿಗಳು ದೊಡ್ಡ ಸಿದ್ದಪ್ಪನ ಗವಿಯನ್ನು ಸವಿತಾಪಿಸುತ್ತಿದ್ದಂತೆಯೇ ಎರಡು ದೀಪಗಳು ಅವರಿಗೆ ಮಾರ್ಗದರ್ಶನಗಳಾಗಿ ಹೋಗತೊಡಗಿದವು. ಸ್ವಾಮಿಗಳು ಗವಿಯನ್ನು ಪ್ರವೇಶಿಸಿದರು. ಬಾಳಪ್ಪ ಹೊರಭಾಗದಲ್ಲಿ ದೂರದ ಒಂದು ಕಲ್ಲುಬಂಡೆಯ ಮೇಲೆ ಇಡೀ ರಾತ್ರಿಯನ್ನು ಕಳೆದ. ರಾತ್ರಿ ಗವಿಯಿಂದ ಘಂಟೆ ಜಾಗಟೆಗಳ ನಾದ ಕೇಳಿಬರುತ್ತಿತ್ತೆಂದು ಮಾತ್ರ ಹೇಳುತ್ತಿದ್ದ.

( —ಜನಜನಿತ ಕಥೆ )

1945 ನೆಯ ಇಸ್ವಿ ನಾನು [32] ನನ್ನ ಸ್ನೇಹಿತರೊಂದಿಗೆ ಚಿಕ್ಕಳ್ಳಿಗೆ ಹೋಗಿದ್ದೆ [33] ಸ್ನೇಹಿತರು ಊರಿನಲ್ಲಿರುವ ತಮ್ಮ ತೋಟಕ್ಕೆ ಎಳೆನೀರು ಕುಡಿದುಬರೋಣ ಎಂದು ನನ್ನನ್ನು ಕರೆದೊಯ್ದರು ತೋಟಕ್ಕೆ ಹೋದೆವು. ನಾವು ಹೋದ ತೋಟದ ಪಕ್ಕದಲ್ಲಿಯೇ ಮಠಕ್ಕೆ ಭಕ್ತರು ಬರೆದು ಕೊಟ್ಟ ಒಂದು ಚಿಕ್ಕ ತೋಟವಿದೆ. ಆತೋಟದಲ್ಲಿ ಕುಳಿತೆವು. ಆ ತೋಟವನ್ನು ಮಠಕ್ಕೆ ಬರೆದುಕೊಟ್ಟವರೇ ಮಾಡುತ್ತಿದ್ದರು. ಅವರು ಸಿದ್ಧಗಂಗಾ ಕ್ಷೇತ್ರದಿಂದ ನಾನು ಬಂದಿರುವೆನೆಂದು ತಿಳಿದು ಆದರಿಸಿದರು. ನಾವು ಆಗಲೇ ಎಳೆನೀರು ಕುಡಿದು ಬಂದಿದ್ದರಿಂದ ಅವರಿಂದ ಎಳೆನೀರು ಕುಡಿಯಲು ಒತ್ತಾಯ ಮಾಡಿದರೂ ಕುಡಿಯಲಿಲ್ಲ. ಆಗ ಅವರು 'ಅನಮ್ಮಪ್ಪ ಉದ್ದಾನಪ್ಪನ ಪುಣ್ಯವೇ ಪುಣ್ಯ' ಎಂದು ಕೈಮುಗಿದು, ಈ ನಮ್ಮ ತೋಟವನ್ನು ಅವರಿಗೇ ಅರ್ಪಿಸಿ ಬಿಟ್ಟಿದ್ದೇವೆ, ಎಂದು ತನ್ನ ತೋಟವನ್ನು ಅರ್ಪಿಸಿದುದರ ಹಿನ್ನೆಲೆಯ ಕಥೆಯನ್ನು ನಮ್ಮ ಆಗ್ರಹದ ಮೇರೆಗೆ ಹೇಳತೊಡಗಿದಳು.

ಸ್ವಾಮಿ ನಮಗೆ ಒಬ್ಬನೇ ಒಬ್ಬ ಮಗ ಅಂತ ಇದ್ದಾ. ಚೆನ್ನಾಗೇ ಇದ್ದ. ಬಾಳಾಕಾಯಿಲೆ ಆಯ್ತು. ನಾವೂ ಕಂಡಕಂಡ ಮದ್ದು ಕೊಟ್ವಿ. ಆದರೂ ಉಳಿಲಿಲ್ಲ. ಸತ್ತು ಹೋಗಿ ಬಿಟ್ಟ. ಸತ್ತು ಹೋದ ಸ್ವಲ್ಪ ಹೊತ್ತಿನಲ್ಲಿ ಮಿಸುಗಿದಾ. ಮೇಲೆ ನಮ್ಗೆಲ್ಲಾ ಸಂತೋಷಾಯ್ತು. ಎದ್ದು ಕೂತ್ಗಂಡಾ ಅವಮ್ಮಾ ನಾನು ಸಿದ್ಧಗಂಗೆ ಹೋಗಿದ್ದೆ. ಉದ್ದಾನಪ್ನೋರು ಏನ್ಬಂದೇ ಊಟಾಮಾಡ್ಹೋಗು ಎಂದರು. ಊಟಾಮಾಡಿಬಂದೆ 'ಎಂದವನೇ ಮತ್ತೆಮಲಗಿದವ್ನು ಮ್ಯಾಲ್ಕೇಳ್ಲಿಲ್ಲ ಸ್ವಾಮಿ' ಎಂದವಳೇ ಬಳಬಳ ಕಣ್ಣೀರು ಸುರಿಸಿದಳು. ಅವಳ ಈ ಕರಳು ಕೊರೆಯುವ ಕತೆ ಕೇಳಿ ನಮಗೂ ಕಸಿವಿಸಿಯಾಯಿತು. ಈ ಘಟನೆ ನಡೆದ ಮೇಲೆ ಸ್ವಲ್ಪ ತೋಟವನ್ನೇ ಸಿದ್ಧಗಂಗೆಗೆ ಬರೆದುಕೊಟ್ಟು ನಾವೇ ಮಾಡುತ್ತಿದ್ದೇವೆಂದಳು. ಇದು ನಾವೇ ಪ್ರತ್ಯಕ್ಷ ಕೇಳಿದ ಕಥೆ. ಈ ಹೆಣ್ಣು ಮಗಳು ಅಗ್ನಿವಂಶ ಕ್ಷತ್ರಿಯ ಜನಾಂಗದವಳು. ( ಅಂದರೆ ತಿಗುಳರು. —ಸ್ವತಃ ಲೇಖಕನು ಕೇಳಿದ್ದು. )

---

32) ನಾನು ಎಂದರೆ ಈ ಲೇಖನ ಬರೆದವ.

33) ಮಠದಿಂದ ಸುಮಾರು ಮೂರು ಮೈಲುಗಳ ಅಂತರದಲ್ಲಿರುವ ಹಿರೇಹಳ್ಳಿ ರೈಲ್ವೆ ಸ್ಟೇಷನ್ ಬಳಿಯಿರುವ ಹಳ್ಳಿ.

(ಮುಂದುವರಿಯುವುದು)



# ನಮ್ಮ ಭಾರತಭೂಮಿ

### ಸ್ವಾಮಿ ವಿವೇಕಾನಂದರು

ಈ ಪೃಥ್ವೀತಲದಲ್ಲಿ ಪುಣ್ಯ ಭೂಮಿ ಎನಿಸಿಕೊಳ್ಳಲು ಅರ್ಹತೆಯುಳ್ಳ ದೇಶ ವಾವುದಾದರೂ ಇದ್ದರೆ, ಅದು ನಮ್ಮ ಭಾರತಭೂಮಿ.... ಈಶಪ್ರಾಪ್ತಿಗಾಗಿ ತವಕಿಸುವ ಪ್ರತಿ ಜೀವಾತ್ಮನೂ ತನ್ನ ಪರಮಸಿದ್ಧಿ ಪಡೆಯಲು ಈ ಭೂಮಿಯಲ್ಲಿಯೆ ಜನ್ಮ ತಾಳಲು ಬೇಕು. ಮಾನವತೆಯು ಸಭ್ಯತೆ-ಉದಾರತೆ–ಪವಿತ್ರತೆ–ಶಾಂತತೆ, ಅದಕ್ಕೂ ಮಿಗಿಲಾಗಿ ಅಂತರ್ಮುಖತೆ-ಆಧ್ಯಾತ್ಮಿಕತೆಗಳೆಂಬ ಸದ್ಗುಣಗಣದಲ್ಲಿ ಪರಾಕಾಷ್ಠೆಯನ್ನು ಎಲ್ಲಿಯಾದರೂ ಪಡೆದಿದ್ದರೆ, ಅದು ಈ ಭಾರತ ಭೂಮಿಯಲ್ಲಿ.

ಇನ್ನಾವ ದೇಶದಲ್ಲಿಯೂ ಸುಜ್ಞಾನವು-ಆತ್ಮಜ್ಞಾನವು ಬೇಡುಬಿಡುವ ಮೊದಲು ಅದು ಭಾರತದಲ್ಲಿ ನೆಲೆಯೂರಿದ್ದಿತು. ಮಾನವ ಕುಲಕ್ಕೇ ಲಲಾಮಭೂತರಾದ ಋಷಿಮುನಿಗಳ ಪಾದಧೂಳಿಯಿಂದ ಪವಿತ್ರವಾಗಿರುವ ನಾಡಾವುದಾದರೂ ಇದ್ದರೆ, ಅದು ನಮ್ಮ ಭಾರತ.

ಮಾನವನ ನಿಜಪ್ರಕೃತಿಯನ್ನು ಕುರಿತು-ಆಂತರಿಕ ಅನುಭವದ ಲೋಕವನ್ನು ಕುರಿತು ಪ್ರಥಮ ಅನ್ವೇಷಣೆಗಳು ನಡೆದುದು ಇಲ್ಲಿ. ಆತ್ಮನ, ಅಮರತ್ವ ಸರ್ವ ನಿಯಾಮಕನಾದ ಹಾಗೂ ಪ್ರಕೃತಿಯಲ್ಲಿ–ಮಾನವನಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನ ಅಸ್ತಿತ್ವ, ಧರ್ಮ, ತತ್ತ್ವಜ್ಞಾನ ಇವುಗಳನ್ನು ಕುರಿತು ಅತ್ಯುದಾತ್ತ ಚಿಂತನೆಗಳು, ಸಿದ್ಧಾಂತಗಳು ತಲೆಯೆತ್ತಿದುದು ಈ ಪಾವನ ಭೂಮಿಯಲ್ಲಿ.

ಇದು ತತ್ತ್ವಜ್ಞಾನದ-ಆಧ್ಯಾತ್ಮಿಕತೆಯ–ನೀತಿಮತ್ತೆಯ–ಮಾಧುರ್ಯದ–ನಯ ವಿನಯಗಳ–ಪ್ರೇಮದ ತಾಯ್ನಾಡು. ಇವು ಇನ್ನೂ ಇಲ್ಲಿ ತಾಳಿ ಬಾಳಿವೆ; ವಿಶಾಲ ಜಗತ್ತಿನ ಬಗ್ಗೆ ನಾನು ಪಡೆದ ಅನುಭವದಿಂದ ಸಾರಿ ಸಾರಿ ಹೇಳ ಬಲ್ಲೆ, — ಈ ಶ್ರೇಷ್ಠ ಗುಣರಾಶಿ ಪಡೆದ ಎಲ್ಲಕ್ಕೂ ಭಾಗ್ಯಶಾಲಿ ದೇಶ ಭಾರತ ವೊಂದೇ ಆಗಿದೆ.

ಶತಮಾನಗಳ ಆಘಾತಗಳ, ಪರಕೀಯರ ನೂರಾರು ದಾಳಿಗಳ, ಲೆಕ್ಕವಿಲ್ಲದಷ್ಟು ಹೊಸಹೊಸದಾಗಿ ಉಂಟಾಗುವ ಸಾಮಾಜಿಕ ರೀತಿನೀತಿಗಳ ಹೊಯ್ಲುಗಳನ್ನು ಸಹಿಸಿ ತನ್ನ ಸಾವರಿಯದ ಜೀವನ ಶಕ್ತಿಯಿಂದ ಸನಾತನ ಶಿಲೆಯಂತೆ ಇನ್ನೂ ಸೆಟೆದು ನಿಂತಿರುವ ದೇಶವೆಂದರೆ ಭಾರತವೊಂದೇ ಆಗಿದೆ.

ಮಾನವನ ಅಮರ ಆತ್ಮನ ಸ್ವಭಾವ ವಿಶೇಷವೇ ನಮ್ಮ ಜನ್ಮಭೂಮಿಯದೂ ಆಗಿದೆ; ಅದಕ್ಕೆ ಆದಿಯಿಲ್ಲ, ಅಂತ್ಯವಿಲ್ಲ. ಇಂತಹ ನಾಡದೇವಿಯ ನಲುಮೆಯ ಮಕ್ಕಳಾಗುವುದು ನಮ್ಮ ಪರಮ ಸೌಭಾಗ್ಯವಾಗಿದೆ.

ಗ್ರೀಸವಿನ್ನೂ ಅಸ್ತಿತ್ವದಲ್ಲಿಲ್ಲದಿರುವಾಗ, ರೋಮದ ಹೆಸರೂ ಕೇಳಿಕೆಯಲ್ಲಿರದಿರುವಾಗ, ಇಂದಿನ ಯುರೋಪಿಯರ ಪೂರ್ವಜರು ಕಾಡುಗಳಲ್ಲಿದ್ದುಕೊಂಡು ಮೈಗೆ ನೀಲೀ ಬಣ್ಣ ಬಳಿದುಕೊಂಡು ತಿರುಗುತ್ತಿರುವಾಗ, ಇಲ್ಲಿ ಜಾಜ್ವಲ್ಯವಾದ ಜೀವನದ ಚಟುವಟಿಕೆಗಳು ನಡೆಯುತ್ತಿದ್ದವು. ಇತಿಹಾಸದ ಆದಿಯೇ ಅಜ್ಞಾತವಾಗಿರುವ ಕಾಲದಿಂದಲೂ ಈ ಭೂಮಿಯಿಂದ ಜೀವನದಾಯಕವಾದ ವಿಚಾರಗಳು ತರಂಗತರಗವಾಗಿ ಹೊರ ಜಗತ್ತಿನ ಮೇಲೆ ಚೆಲ್ಲವರಿದಿವೆ. ಆದರೆ ಇಲ್ಲಿಂದ ಹೊರಟ ಪ್ರತಿ ಸಂದೇಶಕ್ಕೆ ಬೆಂಬಲವಾಗಿ ದೈವೀ ಆಶೀರ್ವಾದವೂ, ಮುಂಬಲವಾಗಿ ದೈವೀ ಶಾಂತಿಯೂ ಜತೆಯಾಗಿವೆ.

ವಿವಿಧ ಧರ್ಮಗಳ ಸಂಶೋಧನದಿಂದ ನಮಗೆ ಕಂಡುಬಂದಿರುವುದೇದೆಂದರೆ, ಯಾವ ದೇಶದ ನೀತಿಶಾಸ್ತ್ರವನ್ನು ನೋಡಿದರೂ, ಯಾವ ಧರ್ಮದಲ್ಲಿಯ ಅಮರತ್ವದ ಕಲ್ಪನೆಗಳನ್ನು ಪರಿಶೀಲಿಸಿದರೂ ಅವು ಒಂದಿಲ್ಲೊಂದು ರೀತಿಯಲ್ಲಿ ಭಾರತದಿಂದಲೇ ಉಗಮ ಹೊಂದಿವೆ.

ಈ ಭೂಮಿಯಿಂದ ಆಧ್ಯಾತ್ಮಿಕತೆ–ತತ್ವಜ್ಞಾನಗಳು ಮಹಾಸಾಗರದಿಂದ ಉಕ್ಕಿ ಬರುವ ಹೆದ್ದೆರಗಳಂತೆ ಭೋರ್ಗರೆಯುತ್ತ ಹೊರಹೊರಟು ಬಾಹ್ಯಜಗತ್ತಿನ ಮೇಲೆ ಆಗಾಗ ಅಪ್ಪಳಿಸುತ್ತ ಬಂದಿವೆ; ಈ ಭೂಮಿಯಿಂದಲೆ ಇಂತಹ ಮಹಾ ತರಂಗಗಳು ಮತ್ತೆ ಹೊರಹೊರಟು, ಕ್ಷೀಣಿಸುತ್ತಿರುವ ಮಾನವ ವಂಶಗಳಲ್ಲಿ ಜೀವನವನ್ನೂ ಶಕ್ತ್ಯುತ್ಸಾಹಗಳನ್ನೂ ತುಂಬಬೇಕೆಂದು ವಿಧಾತನ ಸಂಕೇತವಿದೆ.

'ಹೆಚ್ಚಿನ ಯೋಗ್ಯತೆಯುಳ್ಳವರೇ ಕೊನೆಗುಳಿಯುವರು, ಉಳಿದವರು ಅಳಿದು ಹೋಗುವರು ( Survival of the fittest ) ಎಂದು ಪಾಶ್ಚಾತ್ಯರು ಹೇಳುವರು; ಸಬಲಸ್ನಾಯು-ಮಾಂಸಖಂಡಗಳುಳ್ಳವರೇ ಜೀವನ ಸಂಗ್ರಾಮದಲ್ಲಿ ಕೊನೆಗೆ ಬದುಕಿ ಬಾಳುವ ಯೋಗ್ಯತೆಯುಳ್ಳವರು ಎಂಬುದಾಗಿ ಅವರ ಭಾವನೆ. ಇದು ನಿಜವಿದ್ದಿದ್ದರೆ, ಪ್ರಾಚೀನ ಜಗತ್ತಿನಲ್ಲಿ ಆಕ್ರಮಣ-ಅಭಿಯೋಗಗಳಿಗಾಗಿ ಹೆಸರಾದ ರಾಷ್ಟ್ರಗಳಲ್ಲಿ ಕೆಲವಾದರೂ ಇಂದು ಕೀರ್ತಿಶಾಲಿಯಾಗಿ ಬಾಳ ಬಹುದಾಗಿತ್ತು ; ಹಾಗೂ ಇನ್ನಾವ ರಾಷ್ಟ್ರವನ್ನಾಗಲಿ ಮಾನವ ವಂಶವನ್ನಾಗಲಿ ಗೆದ್ದುಕೊಳ್ಳುವ ಹವ್ಯಾಸಕ್ಕೆ ಹೋಗದ ನಾವು—ದುರ್ಬಲ ಹಿಂದುಗಳು—ನಿರ್ನಾಮವಾಗಿ ಹೋಗಬೇಕಿತ್ತು ! ಆದರೂ ೩೦ ಕೋಟಿಗೂ ಮಿಕ್ಕಿದ ನಾವು ಪ್ರಭವಿಷ್ಣು-ವಿಜಯಿಷ್ಣುಗಳಾಗಿ ಈಗಲೂ ಬಾಳುತ್ತಿದ್ದೇವೆ ! ಜಗತ್ತಿನೆಲ್ಲ ರಾಷ್ಟ್ರಗಳಲ್ಲಿಯೂ, ಇನ್ನೊಂದು



ದೇಶವನ್ನು-ವಂಶವನ್ನು ಗೆಲ್ಲದ ರಾಷ್ಟ್ರವೆಂದರೆ ನಾವಾಗಿರುವುದು ದೇವರು ನಮಗಿತ್ತ ಆಶೀರ್ವಾದವಾಗಿದೆ ; ಅಂತೆಯೆ ನಾವು ತಾಳಿ ಬಾಳಿದ್ದೇವೆ.

ಭಾರತರಾಷ್ಟ್ರವನ್ನು ಯಾರೂ ಸಂಹರಿಸಲರಿಯರು, ಅಜರಾಮರವಾಗಿ ಅದು ನಿಂತಿದೆ. ಈ ಚೈತನ್ಯಮಯ ಭಾವನೆಯು ಹಿನ್ನೆಲೆಯಲ್ಲಿರುವವರೆಗೂ ಭಾರತದ ಮಕ್ಕಳು ತಮ್ಮ ಆಧ್ಯಾತ್ಮಿಕತೆಯನ್ನು ಬಿಸುಟಬಿಡದಿರುವವರೆಗೂ ಅದು ಹಾಗೆಯೇ ನಿಂತಿರುವುದು. ಬೇಕಾದಂತಹ ಅನುವು ಆಪತ್ತುಗಳು ಬಂದರೂ ಭಾರತೀಯರು ದೇವರನ್ನು ತೊರೆಯದಿರಲಿ; ತಾವು ಋಷಿಗಳ ಸಂತಾನರೆಂಬುದನ್ನು ಮರೆಯದಿರಲಿ.

ರಾಜವಂಶಗಳ ಏರಿಳಿವುಗಳು ನಮ್ಮ ಜನಜೀವನವನ್ನು ಎಂದಿಗೂ ಅಷ್ಟೊಂದು ಕದಡಿಸಿಲ್ಲ. ನಮ್ಮ ರಾಷ್ಟ್ರೀಯ ಜೀವನಝರಿ ಒಮ್ಮೆ ನಿಧಾನವಾಗಿ, ಒಮ್ಮೆ ಗುಪ್ತಗಾಮಿನಿಯಾಗಿ, ಮತ್ತೊಮ್ಮೆ ಜಾಗೃತವಾಗಿ, ಮಗದೊಮ್ಮೆ ವೇಗವತಿಯಾಗಿ ಹರಿಯುತ್ತಲೆ ಬಂದಿದೆ. ಒಮ್ಮೊಮ್ಮೆ ಈ ವೇಗದ ಸರಪಳಿಯ ನಡುವಿನ ಕಳಿಗೆಯೊಂದು ಅತಿ ದುರ್ಬಲವಾಗಿ ಕಂಡುಬಂದರೂ ಇನ್ನೊಂದು ತಲೆಮಾರಿನಲ್ಲಿ ಅದು ಮತ್ತಷ್ಟು ಉಜ್ವಲವಾಗಿ ಭುಗಿಲೆಂದು ಬೆಳಗುತ್ತಿರುವುದು. ಶತಮಾನಗಳು ಉರುಳುತ್ತಲೇ ಇವೆ; ಆದರೆ ನಮ್ಮ ಭಾರತಾಂಬೆ ಧೀರ ಗಂಭೀರ ಗತಿಯಿಂದ ರಾಜೈಶ್ವರ್ಯದಿಂದ ಹೆಜ್ಜೆ ಹಾಕುತ್ತ, ತನ್ನೆದುರುಗಿನ ಅತ್ಯುಜ್ವಲ ಸೌಭಾಗ್ಯದ ಶಿಖರದತ್ತ ಮುನ್ನಡೆಯುತ್ತಲೇ ಇರುವಳು. ಪಶುತುಲ್ಯವಾದ ಮಾನವ ಜೀವಿತವು ದೈವಿಕ ಮಾನವತೆಯಾಗಿ ಮಾರ್ಪಡಬೇಕೆಂಬುದೆ ಅವಳ ಜೀವನದ ಜ್ವಲತ್ಸಂದೇಶ. ಈ ಸಂದೇಶವು ಯಶಸ್ವಿಯಾಗಿಯೆ ತೀರುವುದು; ಸ್ವರ್ಗ - ಮೃತ್ಯುಲೋಕಗಳಲ್ಲಿಯ ಯಾವ ಶಕ್ತಿಯೂ ಇದನ್ನು ತಡೆಗಟ್ಟಲಾರದು.

ಉಪನಿಷತ್ತುಗಳು ಆಹ್ವಾನಪೂರ್ವಕವಾಗಿ ಜಗತ್ತಿಗೆ ಹೇಳಿದವು :—'ನ ಧನೇನ ನ ಪ್ರಜಯಾ ತ್ಯಾಗೇನೈಕೇ ಅಮೃತತ್ವಮಾನಶುಃ' (ಧನದಿಂದಲ್ಲ, ಭೂರಿ ಸಂತತಿಯಿಂದಲ್ಲ, ತ್ಯಾಗವೊಂದರಿಂದಲೆ ಅಮೃತತ್ವವನ್ನು ಅನುಭವಿಸಬಹುದಾಗಿದೆ). ಈ ಆಹ್ವಾನಕ್ಕುತ್ತರವಾಗಿ, ಜಗತ್ತಿನ ಹಲವಾರು ಮಾನವವಂಶಗಳು ವಾಸನೆ-ಕಾಮನೆಗಳ ಪಾತಳಿಯ ಮೇಲಿಂದ ಈ ಜಾಗತಿಕ ಯಕ್ಷಪ್ರಶ್ನೆಯನ್ನು ಬಿಡಿಸಲು ಮಿತಿಮೀರಿ ಹೆಣಗಿವೆ ; ಆದರೆ ಅವೆಲ್ಲ ವಿಫಲವಾಗಿವೆ. ಅಧಿಕಾರ-ಐಶ್ವರ್ಯಗಳ ಪಿಪಾಸೆಯಿಂದ ಅನಿವಾರ್ಯವಾಗಿ ಉಂಟಾಗುವ ದುಷ್ಟತೆಯ-ದುಃಖದ ಭಾರದ ಕೆಳಗೆ ಆ ವಂಶಗಳಲ್ಲಿ ಹಳೆಯವು ನಾಮಶೇಷವಾಗಿವೆ, ಹಾಗೂ ಈಚೆಯವು ತತ್ತರಿಸುತ್ತ ನೆಲಕ್ಕುರುಳುವುದರಲ್ಲಿವೆ. ಈಗಲೂ ನಿರ್ಧಾರವಾಗಬೇಕಾದ ಪ್ರಶ್ನೆಯೊಂದಿದೆ. ಶಾಂತಿ ಜಯಶೀಲವಾಗುವುದೋ ಸಮರವೋ? ಸಹಿಷ್ಣುತೆ ಕೊನೆಗುಳಿಯುವುದೋ, ಅಸಹನೆಯೋ? ಒಳ್ಳೆಯತನ ಬಾಳುವುದೋ, ದುಷ್ಟತನವೋ ? ಸ್ನಾಯುಗಳೆ ಗೆಲ್ಲುವವೋ, ಬುದ್ಧಿಯೋ ? ಲೌಕಿಕತೆಯೆ ಪಟ್ಟಾಭಿಷಿಕ್ತವಾಗುವುದೋ, ಆಧ್ಯಾತ್ಮಿಕತೆಯೋ ?

ನಾವೀ ಸಮಸ್ಯೆಯನ್ನು ಎಂದೋ ಬಿಡಿಸಿಬಿಟ್ಟಿರುವೆವು. ಸುಸ್ಥಿತಿ ಬರಲಿ, ದುಃಸ್ಥಿತಿ ಬರಲಿ, ನಮ್ಮ ಜೀವನಸೂತ್ರವನ್ನು ನಾವೆಂದೂ ಬಿಡಲರಿಯೆವು. ಭೌತಿಕ ಭೋಗಪರತೆಯಲ್ಲ—ತ್ಯಾಗಶೀಲತೆಯೆ ನಾವಿತ್ತ ಸವಃಸ್ಯಾಪೂರ್ತಿ ; ಇದುವೆ ಭಾರತದ ಬಾಳಹೊತ್ತಗೆಯ ವಸ್ತು, ಅಮರಗೀತಗಳ ಪಲ್ಲವಿ, ಜೀವಿತದ ಬೆನ್ನುಮೂಳೆ, ಸತ್ತ್ವದ ತಳಪಾಯ, ಅಸ್ತಿತ್ವದ ಅಂತಿಮಹೇತು. ಮಾನವಜಾತಿಯನ್ನು ದೈವಿಕತೆಯತ್ತ ಕರೆದೊಯ್ಯುವುದೆ ನಮ್ಮ ರಾಷ್ಟ್ರಜೀವನದ ಆಂತರಿಕ ಪ್ರೇರಣೆ. ತಾರ್ತರ ಬರಲಿ-ತುರ್ಕ ಬರಲಿ, ಮೊಗಲರಾಳಲಿ-ಆಂಗ್ಲರಾಳಲಿ, ಭಾರತದ ಜೀವನಪ್ರವಾಹವು ತನ್ನೀ ದಿಕ್ಕನ್ನು ಎಂದೂ ಬದಲಿಸಿಲ್ಲ.

ಪರಿಪೂರ್ಣ ನಾಗರಿಕತೆಗಾಗಿ ಜಗತ್ತಿನ್ನೂ ಕಾದಿದೆ ; ಅದಕ್ಕೆ ಬೇಕಾಗುವ ಸಾಧನಸಂಪತ್ತನ್ನು ಭಾರತವೆ ಒದಗಿಸಬೇಕಾಗಿದೆ. ಶತಮಾನಗಳ ಅವನತಿಯೂ ಭಾರತವನ್ನು ಬಾಧಿಸಿಲ್ಲ ; ಅನೂಚಾನವಾಗಿ ಬಂದ ತನ್ನ ಆಧ್ಯಾತ್ಮಿಕ ದಾಯವನ್ನು ಅದು ತನ್ನೆದೆಗವಚಿಕೊಂಡೇ ಇದೆ. ಈ ಅಮೌಲ್ಯನಿಧಿಗಾಗಿ ಜಗತ್ತು ನಿಮ್ಮ ಪೂರ್ವಜರು ಅಪಾರ ಶ್ರಮದಿಂದ ಸಂಗ್ರಹಿಸಿದ ಅಮೃತದ ತಟಕಿಗಾಗಿಯೂ ಅದೆಷ್ಟು ಆತುರವಾಗಿದೆಯೆಂಬುದನ್ನು ನೀವರಿತಿಲ್ಲ.

ದೀರ್ಘರಾತ್ರಿ ಕಡುಬೇಗನೆ ಕಳೆಯಲಿದೆ. ದಿನಕರನು ಪೂರ್ಣವೈಭವದಿಂದ ಉದಯಿಸಲಿದ್ದಾನೆ. ಪ್ರಲಯೋದಧಿಯ ಮಹಾತರಂಗದಂತೆ ಭಾರತದ ಭಾಗ್ಯೋದಯವು ಹರಿದುಬರಲಿದೆ. ಯಾವ ಶಕ್ತಿಯೂ ಅದನ್ನು ಪ್ರತಿಬಂಧಿಸದು.

ವಿಧಾತನ ಸಂಕಲ್ಪವಿದು. ಭಾರತವು ಎದ್ದೇಳಲೇಬೇಕು. ಭಾರತದ ಜನತೆ ಸುಖಿಯೂ ಸಮೃದ್ಧವೂ ಆಗಬೇಕು ; ಅಲ್ಲದೆ ಭಾರತೀಯ ಪಾರಮಾರ್ಥಿಕತೆಯ ಮಹಾಪ್ರವಾಹ ಎಲ್ಲ ಆತಂಕಗಳನ್ನೂ ಕೊಚ್ಚಿಕೊಂಡು ಹೋಗಿ, ತನ್ನ ಮಂಗಲ 'ಜೀವನ'ದಲ್ಲಿ ಕಾಡುಮೇಡುಗಳನ್ನು ಮುಳುಗಿಸಿಬಿಡಲೇಬೇಕು.

## ಅಥರ್ವಣ ವೇದದಲ್ಲಿ ಭಾವೈಕ್ಯಕ್ಕೆ ಋಷಿಯ ಆವಾಹನ

ಭಾವೈಕ್ಯದ ಕೂಗು ಎಲ್ಲೆಡೆ ಹರಡಿರುವ ಈ ಕಾಲದಲ್ಲಿ ಋಷಿಯ ಈ ಭಾವೈಕ್ಯದ ಕೂಗು ಸ್ವಲ್ಪ ಮಟ್ಟಿಗೆ ಸಹಕಾರಿಯಾದೀತೇ ?

ಸಹೃದಯಂ ಸಾಂಮನಸ್ಯಮವಿದ್ವೇಷಂ ಕೃಣೋಮಿ ವಃ। ಅನ್ಯೋ ಅನ್ಯಮಭಿಹರ್ಯತ ವತ್ಸಂ ಜಾತಮಿವಾಘ್ನ್ಯಾ ॥೧॥ ಅನುವ್ರತಃ । ಪಿತುಃ ಪುತ್ರೋ ಮಾತ್ರಾ ಭವತು ಸಂಮನಾಃ। ಜಾಯಾ ಪತ್ಯೇ ಮಧುಮತೀಂ ವಾಚಂ ವದತು ಶಾಂತಿವಾಂ ॥೨॥ ಮಾ ಭ್ರಾತಾ ಭ್ರಾತರಂ ದ್ವಿಕ್ಷನ್ಮಾಸ್ವಸಾರಮುತಸ್ವಸಾ । ಸಮ್ಯಂಚಃ ಸವ್ರತಾ ಭೂತ್ವಾ ವಾಚಂ ವದತ ಭದ್ರಯಾ ॥೪॥ ಯೇನ ದೇವಾ ನ ವಿಯಂತಿ ನೋ ಚ ವಿದ್ವಿಷತೇ ಮಿಥಃ । ತತ್ಕೃಣ್ಮೋ ಬ್ರಹ್ಮ ವೋ ಗೃಹೇ ಸಂಜ್ಞಾನಂ ಪುರುಷೇಭ್ಯಃ ॥೪॥ ಜ್ಯಾಯಸ್ವಂತಶ್ಚಿತ್ತಿನೋ ಮಾ ವಿ ಯೌಷ್ಟ ಸಂರಾಧಯಂತಃ ಸಧುರಾಶ್ಚರಂತಃ । ಅನ್ಯೋ ಅನ್ಯಸ್ಮೈ ವಲ್ಗು ವದಂತ ಏತ ಸಧ್ರೀಚೀನಾನ್ ವಃ ಸಂಯಮನಸಸ್ಕೃಣೋಮಿ ॥೫॥ ಸಮಾನೀ ಪ್ರಪಾ ಸಹವೋಽನ್ನ ಭಾಗಃ ಸಮಾನೇ ಯೋಕ್ತ್ರೇ ಸಹ ವೋ ಭುನಜ್ಮಿ। ಸಂಮ್ಯಂಚೋಽಗ್ನಿಂ ಸಪರ್ಯತಾರಾನಾಭಿಮಿವಾಭಿತಃ ॥೬॥ ಸಧ್ರೀಚೀನಾನ್ ವಃ ಸಂಮನಸಸ್ಕೃಣೋಮ್ಯೇಕ ಶ್ನುಷ್ಟೀಂತ್ಸಂವನೇನ ಸರ್ವಾನ್ । ದೇವಾ ಇವಾಽಮೃತಂ ರಕ್ಷಮಾಣಾಃ ಸಾಯಂ ಪ್ರಾತಃ ಸೌಮನಸೋ ವೋ ಅಸ್ತು ॥೭॥ ( ಅಥರ್ವ ೩-೩೦ )



ನಾನು ಈ ರೀತಿಯಲ್ಲಿ ಅಗ್ನಿಯು ಅಂದರ ವಿಶ್ವ ಮಾನವರ ಹೃದಯದಲ್ಲಿ ಹುದುಗಿರುವ ಜ್ಞಾನಾಗ್ನಿ ದೇವನ ಉಪಾಸನೆ ಮಾಡುವೆನಲ್ಲ, ಅದರಿಂದ ನಿಮ್ಮೆಲ್ಲರ ಹೃದಯಗಳ ಸಮ್ಯಕ್-ಮಿಲಿನವಾಗಲಿ, ಮನಸ್ಸುಗಳ ಸಮ್ಯಕ್-ಮಿಲನವಾಗಲಿ, ಮತ್ತು ದ್ವೇಷಭಾವವು ದೂರವಾಗಿ ಬಿಡಲಿ. ಆಕಳು ಅದೇ ಹುಟ್ಟಿದ ತನ್ನ ಕರುವನ್ನು ಕುರಿತು ಆಕೃಷ್ಟ ವಾಗುವಂತೆ, ನೀವಾದರೂ ಅದೇ ರೀತಿಯಲ್ಲಿ ಪರಸ್ಪರರನ್ನು ಕುರಿತು ಪರಪ್ರೇಮದಿಂದ ಆಕೃಷ್ಟರಾಗಿರಿ ॥೧॥ ಪುತ್ರನು ಪಿತನ ಕಲ್ಯಾಣ ವ್ರತವನ್ನು ಅನುಸರಿಸಲಿ, ಮಾತೆಯೊಡನೆ ಒಂದು ಮನದವನಾಗಲಿ. ಪತ್ನಿಯು ಮಧುಮತ್ತಾದ ವಾಕ್ಕಿನಿಂದ ಪತಿಯ ಚಿತ್ತವನ್ನು ಶಾಂತಿಮಯವಾಗಿ ಮಾಡಲಿ ॥೨॥ ಬಂಧು ಬಂಧುವನ್ನು ದ್ವೇಷಿಸದಿರಲಿ, ಭಗಿನಿ ಭಗಿನಿಯನ್ನು ದ್ವೇಷಿಸದಿರಲಿ. ಎಲ್ಲರೂ ಒಂದೇ ಗುರಿಯ ಸಾಧನೆಯಲ್ಲಿ, ಒಂದೇ ವ್ರತದ ಪಾಲನೆಯಲ್ಲಿ ಸಮ್ಮಿಲಿತರಾಗಿ, ಸುಭದ್ರವಾಕ್ಯಗಳಿಂದ ಒಬ್ಬರೊಡನೊಬ್ಬರು ಸಂಭಾಷಿಸಲಿ ॥ ೩ ॥ (ಸರ್ವೇಶ್ವರ ಭಾವನೆಯ-ಬ್ರಹ್ಮಭಾವನೆಯ ಬಲದಿಂದ) ದೇವತೆಗಳು ಪರಸ್ಪರವಿಚ್ಛಿನ್ನರಾಗದೆ-ಒಬ್ಬರನ್ನೊಬ್ಬರು ದ್ವೇಷಿಸದೆ ಇರುವಂತೆಯೆ, ನಿಮ್ಮಲ್ಲಿ-ಅಖಿಲಮಾನವರಲ್ಲಿ ಅಂತಹ ಏಕಮತಿಯ ನಿರ್ಮಾತೃವಾದ ಸಂಜ್ಞಾನ (ಸಮ್ಯಗ್-ಜ್ಞಾನ) ವನ್ನು ಪ್ರಚೋದನಗೊಳಿಸುವ ಬ್ರಹ್ಮ-ಭಾವಾತ್ಮಕ ಯಜ್ಞವಿಧಿಯನ್ನು ಮನೆಮನೆಯಲ್ಲಿಯೂ ಪ್ರತಿಷ್ಠಾಪಿಸುವೆನು ॥ ೪ ॥ ಒಮ್ಮನದವರಾಗಿ, ಹಿರಿಯರು-ಕಿರಿಯರೆಂಬ ಸ್ವಾಭಾವಿಕ ನಿಯಮವನ್ನನುಸರಿಸಿ, ಒಂದು ಹಿರಿಗುರಿಯ ಸಾಧನೆಯನ್ನು ಒಕ್ಕಟ್ಟಿನಿಂದ ಮಾಡುತ್ತ, ತಂತಮ್ಮ ಕಾರ್ಯಸಾಧನೆಯನ್ನು ಹೊತ್ತುಕೊಂಡು ಎಲ್ಲರೂ ಸಾಗಲಿ, ಒಬ್ಬರೊಡನೊಬ್ಬರು ಪ್ರಿಯವಾಗಿ ಸಂಭಾಷಿಸುತ್ತ ಮುನ್ನೆಡೆಯಲಿ. ನೀವೆಲ್ಲರೂ ಒಂದು ಸಾಧ್ಯದ ಕಡೆಗೆ ನೆಟ್ಟ ದೃಷ್ಟಿಯುವರೂ ಏಕಮನಸ್ಕನವರೂ ಆಗಿರೆಂದು ಕೇಳಿ

( 19 ನೇ ಪುಟ ನೋಡಿ )

# ಸಿಂಹದ ಹಚ್ಚೆ

—ಪ. ರಾಮಕೃಷ್ಣ ಶಾಸ್ತ್ರಿ

ಒಂದು ಊರಿನಲ್ಲಿ ಒಬ್ಬ ಪ್ರಖ್ಯಾತ ಜಟ್ಟಿ ಇದ್ದ. ತನ್ನ ಪ್ರಸಿದ್ಧಿಗೂ ಪೌರುಷಕ್ಕೂ ತಕ್ಕ ಹಾಗೆ ಎರಡೂ ರಟ್ಟೆಗಳ ಮೇಲೆ ಸಿಂಹದ ಚಿತ್ರವನ್ನು ಹಚ್ಚೆ ಹಾಕಿಸಿಕೊಳ್ಳಬೇಕೆಂದು ಆತ ನಿಶ್ಚಯಿಸಿದ. ಅದಕ್ಕಾಗಿ ಜಟ್ಟಿ ಓರ್ವ ಹಜಾಮನ ಬಳಿಗೆ ಹೋಗಿ, "ನಾನು ಜನಿಸಿದ್ದು ಸಿಂಹಲಗ್ನದಲ್ಲಿ, ನನಗಿಂತ ಧೈರ್ಯಶಾಲಿಯನ್ನೂ ಸಾಹಸಿಯನ್ನೂ ನೀನು ಬೇರೆಲ್ಲೂ ಕಂಡಿರಲಿಕ್ಕಿಲ್ಲ. ಇದಕ್ಕಾಗಿ ನನ್ನ ರಟ್ಟೆಗಳೆರಡರ ಮೇಲೂ ಸಿಂಹದ ಚಿತ್ರವನ್ನು ಹಚ್ಚೆ ಚುಚ್ಚಿಬಿಡು" ಎಂದು ಹೇಳಿದ.

ಹಜಾಮ ಆ ಕೆಲಸಕ್ಕೆ ಒಪ್ಪಿಕೊಂಡ. ಒಂದು ಸೂಜಿಯನ್ನು ತಂದು, ಸೂಜಿಯಿಂದ ಜಟ್ಟಿಯ ರಟ್ಟೆಯಮೇಲೆ ಹಜಾಮ ಒಂದು ಸಾರಿ ಚುಚ್ಚಿದ. ಆ ಕೂಡಲೇ ಜಟ್ಟಿಗೆ ತಾಳಲಾಗದ ನೋವಾಯಿತು. ಎರಡು ಮೂರು ಸಲ ಚುಚ್ಚುವಾಗ ಅವನು ಚಡಪಡಿಸ ಹತ್ತಿದ. "ಸಾಕೋ ಸಾಕು ನಿಲ್ಲಿಸು. ಈಗ ಏನು ಚುಚ್ಚುತ್ತಿದ್ದೀ ? ಎಂದು ಕೇಳಿದ. ಸಿಂಹದ ಬಾಲವನ್ನು ಬಿಡಿಸಲಾರಂಭಿಸಿದ್ದೇನೆ ಧನಿಗಳೇ" ಎಂದ ಹಜಾಮ.

"ಸರಿಯಾಯ್ತು ಕಣಯ್ಯ, ಅಲ್ಲವೋ, ದೊಡ್ಡ ಜನಗಳು ತಮ್ಮ ಮನೆಯ ಕುದುರೆ ಮತ್ತು ನಾಯಿಗಳ ಬಾಲವನ್ನು ಕತ್ತರಿಸುತ್ತಾರೆ. ಬಾಲವಿಲ್ಲದ ಪ್ರಾಣಿಗೆ ಪೌರುಷ ಹೆಚ್ಚಂತೆ. ಆದ್ದರಿಂದ ಬಾಲವಿಲ್ಲದ ಸಿಂಹದ ಚಿತ್ರವನ್ನೇ ಹಚ್ಚೆ ಚುಚ್ಚಿಬಿಡು" ಎಂದ ಜಟ್ಟಿ.

"ಆಗಲಿ ಒಡೆಯಾ" ಎಂದು ಹಜಾಮ ಚುಚ್ಚಲಾರಂಭಿಸಿದ. ಜಟ್ಟಿಗೆ ನೋವು ತಡೆಯಲಾಗದೆ "ಈಗ ಏನು ಚುಚ್ಚುತ್ತಿದ್ದೀ ?" ಎಂದು ಕೇಳಿದ. "ಸಿಂಹದ ಕಿವಿಯನ್ನು ಬಿಡಿಸತೊಡಗಿದ್ದೇನೆ" ಎಂದ ಹಜಾಮ.

"ಒಳ್ಳೆಯದು ಮಾಡಿದೆ ಒಳ್ಳೆಯದೇ, ನೀನು ನಾಯಿ ಸಾಕುವವರನ್ನು ಕಂಡಿದ್ದೀಯಾ ? ಅವರೇನು ಮಾಡುತ್ತಾರೆ, ನಾಯಿಗಳ ಕಿವಿಗಳನ್ನು ಕತ್ತರಿಸುತ್ತಾರೆ. ಜೋತುಬಿದ್ದ ಕಿವಿ ನಾಯಿಗೆ ಅವಲಕ್ಷಣ. ಸಿಂಹಗಳಲ್ಲೂ ಕಿವಿಯಿಲ್ಲದ ಜಾತಿಯೇ ಮಿಗಿಲಾದುದು" ಎಂದ ಜಟ್ಟಿ.

"ಹಾಗೆಯೇ ಹಾಗಲಿ ಸ್ವಾಮಿ, ಕಿವಿಗಳಿಲ್ಲದ ಸಿಂಹವನ್ನೇ ಚಿತ್ರಿಸುತ್ತೇನೆ" ಎಂದು ಹಜಾಮ ಕಾಯಕವನ್ನು ಮುಂದುವರಿಸಿದ. ಆದರೆ ಪ್ರತಿಸಾರೆ ಚುಚ್ಚಿದಾಗಲೂ ಪ್ರಾಣ ಹಾರಿಹೋದಂತಾಗುತ್ತಿದ್ದ ಜಟ್ಟಿ, "ತಡೆಯಪ್ಪಾ, ಈಗ ಚುಚ್ಚುತ್ತಿರುವುದೇನು ? ಎಂದು ಕೇಳಿದ.



"ಸಿಂಹದ ಸೊಂಟವನ್ನು ಚುಚ್ಚಲಾರಂಭಿಸಿದ್ದೇನೆ" ಎಂದ ಹಜಾಮ. "ಇದೀಗ ಚೆನ್ನಾಯಿತಯ್ಯಾ, ಏನೋ ನೀನು ಯಾವಾಗಲಾದರೂ ಕಾವ್ಯಗಳನ್ನು ಓದಿದ್ದೀಯಾ? ಮಂಗನಿಗೇನು ಗೊತ್ತು ಮಾಣಿಕ್ಯದ ಬೆಲೆ ? ಸಿಂಹದ ಸೊಂಟ ಇರುವುದಿಲ್ಲ ಎಂದಿದ್ದಾರೆ ಕವಿಗಳು. ಸೊಂಟವಿದ್ದರೂ ಅದು ಸೂಕ್ಷ್ಮವಾದುದು. ಅದಕ್ಕಾಗಿ ತರುಣಿಯರ ಸೊಂಟವನ್ನು ಸಿಂಹದ ಸೊಂಟಕ್ಕೆ ಹೋಲಿಸಿ, ಸುಂದರಿ ಸ್ತ್ರೀಯರನ್ನು ಸಿಂಹೇಂದ್ರ ಮಧ್ಯಮ ಎಂದು ಸಂಬೋಧಿಸಿರುವುದು. ಇದೊಂದೂ ನಿನಗೆ ತಿಳಿದಿರಲಾರದು. ಆದಕಾರಣ ನೀನು ಸಿಂಹವನ್ನು ಸೊಂಟವಿಲ್ಲದೆ ಚುಚ್ಚು. ಆಗ ಚಿತ್ರ ಎಷ್ಟು ಭೇಷಾಗಿ ಕಾಣುಣದೋ ನೋಡು" ಎಂದು ಉಪದೇಶಿಸಿದ ಜಟ್ಟಿ.

ಇಷ್ಟು ಶಕ್ತಿಯಿದ್ದರೂ ಒಂದು ಸೂಜಿಯ ನೋವನ್ನೂ ತಾಳಿಕೊಳ್ಳುವ ಶಕ್ತಿಯಿಲ್ಲ ಈ ಜಟ್ಟಿಗೆ ಎಂದು ಹಜಾಮನಿಗೆ ಗೊತ್ತಾಯಿತು ಆತ ಸೂಜಿಯನ್ನೂ ಬಣ್ಣವನ್ನೂ ಮೂಲೆಗೆ ತಳ್ಳಿ, "ಉಸ್ತಾದಿಗಳೇ, ನಿಮಗೆ ದೊಡ್ಡ ನಮಸ್ಕಾರ. ನಾನು ನಿಮ್ಮ ಕೈಗೆ ಹಚ್ಚೆ ಚುಚ್ಚುವುದೂ, ನೀವು ಚುಚ್ಚಿಸಿಕೊಳ್ಳುವುದು ಎರಡೂ ಬೇಡ. ನನಗೆ ತೊಂದರೆ ಕೊಡದೆ ತಾವು ಇಲ್ಲಿಂದ ಸುಮ್ಮನೆ ಹೋಗಿಬಿಡಿ" ಎಂದು ಕೈ ಮುಗಿದ.

ಅದರಿಂದ ಜಟ್ಟಿಗೆ ನಿರಾಶೆಯಾಗಲಿಲ್ಲ. ಅವನು ಮೀಸೆಯಡೆಯಲ್ಲೇ ನಗುತ್ತಾ, "ಪೆಂಗೇ, ನಿನಗೆ ಹಚ್ಚೆ ಚುಚ್ಚಲು ತಿಳಿಯುವುದಿಲ್ಲವೆಂದು ಆರಂಭದಲ್ಲೇ ಹೇಳಬಾರದಿತ್ತೇ ?" ಎಂದು ಎದೆತಟ್ಟಿಕೊಂಡು ಅಲ್ಲಿಂದ ಹೊರಟುಹೋದ.

(ಸ್ವಾಮಿ ರಾಮತೀರ್ಥರು ಹೇಳಿದ ನೀತಿ ಕಥೆ)

---

( 17 ನೇ ಪುಟದಿಂದ )

ಕೊಳ್ಳುವೆನು ॥ ೫ ॥ ಒಂದೇ ಪಾನಶಾಲೆಯಲ್ಲಿ ಜಲಪಾನ ಮಾಡಿರಿ. ಒಂದೇ ಅನ್ನ ಸತ್ರದಲ್ಲಿ ಅನ್ನಸೇವನೆ ಮಾಡಿರಿ. ನಾನು ನಿಮ್ಮನ್ನು ಒಂದೇ ಸ್ನೇಹರಜ್ಜುವಿನಿಂದ ಬಂಧಿಸುವೆನು. ಒಂದೇ ಗುರಿಯುವರಾಗಿ ಅಗ್ನಿಯನ್ನು ಅರ್ಚಿಸಿರಿ. ರಥದ ಚಕ್ರದ ಅರಗಳು (ಹಲ್ಲುಗಳು) ಅದರ ಅಚ್ಚಿನಲ್ಲಿ (ಗಡ್ಡೆಯಲ್ಲಿ) ಕೇಂದ್ರಿತವಾಗಿ ಐಕ್ಯ-ಭದ್ರತೆಗಳಿಂದೊಡಗೂಡಿರುವಂತೆ ಒಟ್ಟಾಗಿ-ಒಂದೇ ಗುರಿಯುವರಾಗಿ ಅಗ್ನಿಯನ್ನು ಅರ್ಚಿಸಿರಿ ॥ ೬ ॥ ಒಂದೇ ಸಂವನನದಿಂದ (ಎಂದರೆ ಸಮತ್ವಸಾಧಕ ಸ್ತೋತ್ರದಿಂದ) ನಿಮ್ಮನ್ನೆಲ್ಲರನ್ನು ಒಂದು ಲಕ್ಷ್ಯದ ಸಾಧನೆಯಲ್ಲಿ ಒಮ್ಮನದವರಾಗಿ ಮಾಡುವೆನು. ಎಲ್ಲರೂ ಏಕಾನ್ನಭೋಜಿಗಳಾಗಿರಿ. ಸ್ವರ್ಗದ ಅಮೃತದ ರಕ್ಷಣೆಗಾಗಿ ದೇವತೆಗಳೆಲ್ಲರೂ ಏಕಮನರಾಗುವಂತೆಯೆ, ಹಗಲಿರುಳೂ ನೀವೆಲ್ಲರೂ ಸೌಮನಸ್ಯವುಳ್ಳವರಾಗಿರಿ.)

( ಕೃಪೆ ಪ್ರದೀಪ )

# " ಸ್ವಾತಿ ಮಳೆ ನೀರು "

—ರಾಜವೈದ್ಯ ವೈ. ಆರ್. ಪಂಡಿತ ವಾಸು ಆರ್. ಎಂ. ಪಿ.

**ವೈದ್ಯ ಜ್ಞಾನದ ಗುರು ಆಯುರ್ವೇದ :**

ಭಾರತದ ಇತಿಹಾಸ ಮಹತ್ವಪೂರ್ಣವಾದದ್ದು. ಭಾರತದ ಆಯುರ್ವೇದ
ವೈದ್ಯಪರಂಪರೆಯನ್ನು ಬೆಳಗಲು ಸಹಸ್ರಾರು ಮಹಾ ಪುರುಷರು ಈ ಪುಣ್ಯಭೂಮಿ
ಯಲ್ಲಿ ಜನಿಸಿ ಪುನೀತರಾಗಿ ತಮ್ಮ ತ್ಯಾಗಮಯ ಜೀವನದಿಂದ ಜನತೆಯ ಪ್ರಗತಿ
ಗಾಗಿ ಆಯುರ್ವೇದ ವೈದ್ಯಸಾರವನ್ನು ಕೈಗೊಂಡರು. ಈ ಎಲ್ಲಾ ಮಹಾಪುರುಷರ
ಗುರಿಯೂ, ದೈವಸಾಕ್ಷಾತ್ಕಾರವೇ ಆಗಿದ್ದುದರಿಂದ ಇದಕ್ಕಾಗಿ ಎಲ್ಲರೂ ಒಂದಿಲ್ಲೊಂದು
ರೀತಿಯಲ್ಲಿ ಶ್ರಮಿಸಿದವರೇ ಆಗಿದ್ದಾರೆ. ಹಾಗೆ ಆಯುರ್ವೇದ ಉಳಿವಿಗಾಗಿ, ಮಾನ
ವನ ನೈತಿಕ ಉನ್ನತಿಗಾಗಿ, ಮನುಜಕುಲದ ಶ್ರೇಷ್ಠತೆಗಾಗಿ ಶ್ರಮಿಸಿದವರಲ್ಲಿ ಹಾಗೂ
ಆಯುರ್ವೇದ ಸಾಗರದಲ್ಲಿ ಓಲಾಡಿ, ಆಶ್ರಿತ ಜನರಿಗೆ "ಕಾಮಧೇನು"-"ಕಲ್ಪವೃಕ್ಷ"
ಎಂದೆನಿಸಿಕೊಂಡಿದ್ದ ಶ್ರೀಮನ್ಮಹಾರಾಜ ಶ್ರೀ ಶ್ರೀ ಜಯಚಾಮರಾಜೇದ್ರ ಒಡೆಯರ್
ಬಹದ್ದೂರ್ ಮಹಾಸ್ವಾಮಿಯವರೂ ಒಬ್ಬರು.

ನಾವೆಲ್ಲರೂ ಜತೆಗೂಡಿ ಇರುವ, ಜೊತೆಗೂಡಿ ಊಟ ಮಾಡುವ, ಆರೋಗ್ಯ
ವಂತರಾಗಿ ಹಾಗೂ ತೇಜೋವಂತರಾಗಿ ಬಾಳುವ, ಜೊತೆಗೂಡಿಯೇ ಶಕ್ತಿ ಸಾಮ
ರ್ಥ್ಯಗಳನ್ನು ತೋರುವ ಪರಸ್ಪರರನ್ನು ದ್ವೇಷಿಸುವುದು ಬೇಡ, ಈ ವಿಶ್ವವು ಶಾಂತಿ
ಧಾಮವಾಗಲಿ ಎಂದು ಶ್ರೀ ಶ್ರೀ ಮಹಾಸ್ವಾಮಿಯವರು ತಮ್ಮ ಭಾಷಣದಲ್ಲಿ ಒತ್ತಿ
ಹೇಳುತ್ತಿದ್ದರು. ಈ ಮಾತುಗಳು ನಿಜವಾಗಿಯೂ, ನಿಸ್ಸಂಶಯವಾಗಿಯೂ, ಕ್ಷೇಮ
ಕರವಾಗಿಯೂ ಇವೆ ಅಲ್ಲವೇ ?

ಅನೇಕ ಮಹರ್ಷಿಗಳು ಮತ್ತು ಗೋಷಾಯಿಗಳಿಂದ ಆಯುರ್ವೇದ ವೈದ್ಯವು
ಪವಿತ್ರವಾಗಿದೆ. ಅಂತಹ ಮಹರ್ಷಿ ಮಹನೀಯರಲ್ಲಿಪರಮ ಶ್ರೇಷ್ಠರು ಈಗಲೂ
ಅಲ್ಲಲ್ಲಿ ಕಾಣಸಿಗುತ್ತಾರೆ. ಆಕಾಶದಿಂದ ಬೀಳುವ ಮಳೆ ಹನಿಯಲ್ಲಿಯೂ ಜೀವನ
ಶಕ್ತಿ ಇದೆ, ಇದನ್ನು ಸೇವನೆ ಮಾಡುವವರು ಯಾವಾಗಲೂ ರೋಗಗಳಿಂದ ದೂರ
ವಾಗಿರುತ್ತಾರೆ. ಶರೀರ ಮತ್ತು ರೋಗಗಳ ವಿಧಾನಗಳು ಈ ಸ್ವಾತಿ ಮಳೆ ಹನಿ
ಗಳಿಗೆ ಪೂರಕವಾಗಿವೆ.

ನಿತ್ಯವೂ ಹಿತಕರವಾದ ಆಹಾರವನ್ನು ಸೇವಿಸಬೇಕು. ಹಿತಕರವಾದ ಕಾರ್ಯ
ಕಲಾಪಗಳಲ್ಲಿಯೇ ತೊಡಗಬೇಕು. ವಿವೇಕದ ಪ್ರೇರಣೆಯಂತೆ ವರ್ತಿಸಬೇಕು.
ಇಂದ್ರಿಯ ವಿಲಾಸಗಳಲ್ಲಿ ಹೆಚ್ಚಾಗಿ ಗಮನ ಕೊಡಬಾರದು. ದಾನಿಯೂ, ಸಮತಾ



ಬುದ್ಧಿಯುಳ್ಳವನೂ ಆಗಿರಬೇಕು. ಸತ್ಯಶೀಲನೂ, ಕ್ಷಮಾಗುಣಿಯೂ, ಸೇವಾ ಭಾವನೆ
ವುಳ್ಳವನಾಗಿರಬೇಕು. ಇದು ಮಾನವನ ಧರ್ಮ.

ನಮ್ಮ ಭಾರತದಲ್ಲಿ ಸುಮಾರು ೭೦ ಕೋಟಿ ಜನಗಳಲ್ಲಿ ೭೦ ಜನಗಳಿಗೂ
ಸಹ "ಸ್ವಾತಿ ಮಳೆ ಹನಿ" ಗಳ ಮೂಲ ತಿಳಿದಿರುವುದೆಂದು ಹೇಳಲು ಸಾಧ್ಯವಿಲ್ಲ,
ಇದು ಅಂಥಹ ಬ್ರಹ್ಮ ವಿದ್ಯೆಯ ಸಮಾನವಾದ ಅತಿ ಮಹತ್ತಾದ ವಿಚಾರ.
ವಿದ್ಯೆಯನ್ನು ಸಂಪೂರ್ಣವಾಗಿ ಶೋಧಿಸಲು ಜನ್ಮಾಂತರಗಳಾದರೂ ಸಾಧ್ಯವಾಗು
ವುದಿಲ್ಲವೆಂದೂ, ತಿಳಿದಷ್ಟು ಇನ್ನೂ ಇದ್ದೇ ಇರುವುದೆಂದೂ, ಆದ ಕಾರಣ ಮಾನ
ವನು ತಾನು ವಿದ್ಯಾರ್ಜನೆ ಮಾಡಿದಷ್ಟೂ ತಾನು ಎಲ್ಲರಿಗಿಂತಲೂ ಚಿಕ್ಕವನೆಂದು
ತಿಳಿಯಬೇಕೆಂದು ಹಿರಿಯರ ವಾಕ್ಯ ಸಾರುತ್ತಿದೆ. ನಾನೇನೂ ಅಷ್ಟು ತಿಳಿದವನಲ್ಲ
ಆದಾಗ್ಯೂ ನಮ್ಮ ಗುರುಗಳು ಅನುಗ್ರಹಿಸಿರುವ ವಿಚಾರಗಳನ್ನು ಇಲ್ಲಿ ಹೇಳಲು
ಬಯಸುತ್ತೇನೆ.

ದೇವರನ್ನು ನಂಬಬೇಕು, ಆಹಾರಕ್ಕಾಗಿ ಪ್ರಾಣಿಗಳನ್ನು ಕೊಲ್ಲಬೇಡಿ, ಧರ್ಮ
ವನ್ನು ಪಾಲಿಸಿ. ಪಾಪರಹಿತವಾದ ಆಯುರ್ವೇದ ಚಿಕಿತ್ಸಾಕ್ರಮವನ್ನು ಅನುಸರಿಸಿ
ಶ್ರೇಯಸ್ಕರವಾದ ಮಾರ್ಗವನ್ನು ಅನುಸರಿಸಿ, ಆರೋಗ್ಯ ರಕ್ಷಣೆ ಮಾಡಬಲ್ಲ ಆಯು
ರ್ವೇದವು ಸಿದ್ಧವಿದೆ, ಆಯುರ್ವೇದವು ಪುನರುತ್ಥಾನವಾಗಬೇಕಾದರೆ ವೈದ್ಯರು
ಮೊಟ್ಟಮೊದಲಾಗಿ ಆತ್ಮವಿಶ್ವಾಸ ಹೊಂದಬೇಕು. ಮುಖ್ಯವಾಗಿ ತಾವು ಕಲಿತ ಆಯು
ರ್ವೇದ ವೈದ್ಯಪದ್ಧತಿಯನ್ನು ಆಚರಣೆಯಲ್ಲಿ ತರಲು ಪ್ರಯತ್ನಿಸಬೇಕು. ತಮ್ಮ
ಲ್ಲಿರುವ ರಹಸ್ಯ ಚಿಕಿತ್ಸೆಗಳನ್ನೂ, ದ್ರವ್ಯಗಳನ್ನೂ ತಿಳಿಸಿ, ಇದರಿಂದ ಆಯುರ್ವೇ
ದದ ಪುನರುತ್ಥಾನಕ್ಕೆ ಆದರ್ಶ ಮಾರ್ಗವಾಗುತ್ತದೆ, ಔಷಧೀಯ ಕರ್ತೃತ್ವದಲ್ಲಿ
ಲೋಪಬಾರದಂತೆ ಅದನ್ನು ಜನಪ್ರಿಯಗೊಳಿಸಬೇಕು.

ಅನೇಕ ರೋಗಗಳನ್ನು ಆಯುರ್ವೇದ ಚಿಕಿತ್ಸೆಯಿಂದ ಗುಣಪಡಿಸಲು ಸಾಧ್ಯ
ವಿದೆ ಎಂಬುದನ್ನು ಜನತೆಯಲ್ಲಿ ಪ್ರತಿಬಿಂಬಿಸುವಂತೆ ಮಾಡಬೇಕು. ಆಯುರ್ವೇ
ದದಲ್ಲಿ ಬಳಸುವ ಉತ್ತಮವಾದ ಮಹಾ ಮೂಲಿಕೆಗಳು ಮೃತ ಶರೀರವನ್ನು ಪುನಃ
ಜೀವಂತ ಮಾಡುವ ಅದ್ಭುತವಾದ ಶಕ್ತಿ ಇವೆ. ಆಧುನಿಕ ವೈದ್ಯ ಶಾಸ್ತ್ರಜ್ಞರು
ಪರಾಭವಗೊಂಡ ಅನೇಕ ರೋಗಗಳು ಆಯುರ್ವೇದ ಪದ್ಧತಿಯಿಂದ ಗುಣವಾಗಿವೆ.
ಒಂದು ಕಾಲದಲ್ಲಿ ಲೋಕಕ್ಕೇ ವೈದ್ಯ ಜ್ಞಾನದ ಗುರುವಾಗಿ ಮೆರೆಯುತ್ತಿದ್ದ ನಮ್ಮ
ಆಯುರ್ವೇದ ವೈದ್ಯರು ಇಂದು ನಮ್ಮ ನಾಡಿನಲ್ಲಿಯೇ ಪ್ರತಿಷ್ಠಾ ಶೂನ್ಯರಾಗಿ
ಉಳಿದಿರುವುದು ಎಂಥಹ ದುರ್ದೈವ; ವೈದ್ಯರು ವೈದ್ಯರಲ್ಲಿಯೇ ಅಸೂಯೆ,
ದ್ವೇಷ, ಇವುಗಳನ್ನು ಬಿಟ್ಟು ಆತ್ಮವಿಶ್ವಾಸದಿಂದ ನಡೆದುಕೊಂಡರೆ ಆಯುರ್ವೇದ
ಉದ್ಧಾರ ಮಾತ್ರವಲ್ಲ. ನಮ್ಮ ಜನಾಂಗದ ಉದ್ಧಾರವೂ ಆದೀತು ಎಂದು ನಮ್ಮ
ನ್ನಾಳಿದ ಶ್ರೀ ಶ್ರೀ ಮಹಾಸ್ವಾಮಿಯವರು ಭಾಷಣವೊಂದರಲ್ಲಿ ನುಡಿದಿದ್ದಾರೆ.

ಪರಮಾತ್ಮನು ತಾನು ಪುರುಷ ಸ್ವರೂಪನಾಗಿದ್ದು ಮತ್ತು ಪ್ರಕೃತಿ ಸ್ವರೂಪ
ಳಾದ ಮಾಯೆಯನ್ನು ತನ್ನ ಅಧೀನವಾಗಿಟ್ಟುಕೊಂಡು ತಾನು ಮಾತ್ರ ಮಾಯಾ
ಧೀನನಾಗದೆ ಇನ್ನುಳಿದ ಮಾನವರಾದಿಯಾಗಿ ಸರ್ವ ಜೀವಕೋಟಿಗಳೂ ಸಹ
ಮಾಯಾಧೀನರನ್ನಾಗಿ ಸೃಷ್ಟಿಸಿ ಎಲ್ಲರಿಗೂ ಅತ್ಯಗತ್ಯವಾದ, ಸರ್ವ ವಿಧವಾದ ಅನು
ಕೂಲಗಳನ್ನೂ ಈ ಪ್ರಕೃತಿಯಲ್ಲೇ ನಿರ್ಮಿಸಿರುತ್ತಾನೆ. ಇಂಥಹ ವರ್ಣನಾತೀತ
ನಾದ ತನ್ನ ಮಹಿಮೆಗಳನ್ನು ಮಾನವನಿಗೆ ಗೋಚರವಾದುವುಗಳಲ್ಲಿ "ಸ್ವಾತಿ"
ಮಳೆಯೂ ಒಂದಾಗಿದೆ ಯೆಂಬುದನ್ನು ನಿಸ್ಸಂದೇಹವಾಗಿ ನಿರ್ಧರಿಸಬಹುದಾಗಿದೆ.
"ಸ್ವಾತಿ" ಮಳೆಯೂ ಸಹ ನಾಲ್ಕು ಪಾದಗಳುಳ್ಳದ್ದಾಗಿರುತ್ತೆ. ಒಟ್ಟು ನಾಲ್ಕು
ಪಾದಗಳಿಂದ ಹನ್ನೆರಡು ದಿನಗಳು ಈ ಮಳೆ ಬರುತ್ತೆ. ಈ ಜಗತ್ತಿನಲ್ಲಿ ಕಾಣ
ಬರುವ ಪ್ರಕೃತಿಯು ತನ್ನ ವೈವಿಧ್ಯತೆಯನ್ನು. ಅನಂತ ರೂಪಗಳನ್ನು ಧಾರಣೆಮಾಡಿ
ಜೀವಕೋಟಿಗಳಿಗೂ, ಮತ್ತು ಮುಖ್ಯವಾಗಿ ಮಾನವನಿಗೆ ಜನ್ಮಿಸಿ ದಂದಿನಿಂದ ಜೀವ
ಮಾನದ ಅಂತ್ಯದವರೆಗೂ ಅವನ ಜೀವಿತ ಮತ್ತು ದೇಹಾರೋಗ್ಯ ತನ್ಮೂಲಕ ಭಗ
ವಂತನ ಸದಾಕಾಲ ಸ್ಮರಣೆಯಿಂದ ಇಹಲೋಕದ ವ್ಯಾಪಾರವನ್ನು ಪೂರ್ವಜನ್ಮಕೃತ
ಪಾಪ ಪುಣ್ಯಗಳಿಗನುಸಾರವಾಗಿ ಅನುಭವಿಸುತ್ತಾ ತನ್ನ ಮುಂದಿನ ಜನ್ಮದ ಸಾಫಲ್ಯ
ಕ್ಕೋಸ್ಕರ ಪರಲೋಕ ಸಾಧನೆಗೂ ಸಹಸೃಷ್ಟಿಯಲ್ಲಿನ ಯಾವ ಪ್ರಾಣಿಗೂ ಕೊಡದೆ
ಇರತಕ್ಕ ಜ್ಞಾನದ ಅರಿವನ್ನು ಕರುಣಿಸಿದ್ದು, ಕೈಲಿ ಸಾಧ್ಯ ವಾದಷ್ಟು ಇತರರಿಗೆ ಉಪ
ಕಾರವನ್ನು ಉಪಾರತೆಯಿಂದ ಗೈಯುತ್ತಾ ತಮ್ಮ ಜನ್ಮವನ್ನೂ ಸಹ ಸಾರ್ಥಕ ಮಾಡಿ
ಕೊಳ್ಳಬೇಕಾದುದು ಮಾನವನ ಅಜನ್ಮ ಕರ್ತವ್ಯವಾಗಿರುತ್ತೆ. ಇದಕ್ಕೆ ಜ್ಞಾನಿಗಳು
ಆತ್ಮೋಧ್ಧಾರವೆಂದು ಕರೆಯುತ್ತಾರೆ, ಶ್ರೀ ಕೃಷ್ಣ ಪರಮಾತ್ಮನೂ ಸಹ ಗೀತಾ ವಾಕ್ಯ
ದಲ್ಲಿ ಯಾರು ನನ್ನನ್ನೇ ಸದಾ ಆಶ್ರಯಿಸಿಕೊಂಡು ನನ್ನನ್ನೇ ಧ್ಯಾನಿಸುವರೋ
ಅಂಥವರನ್ನು ಕೈ ಬಿಡದೆ ಇಹಪರಗಳೆರಡರಲ್ಲೂ ಕಾಪಾಡಿ ಉದ್ಧಾರ ಮಾಡುತ್ತೇನೆಂದು
ಶೃತಪಡಿಸಿರುತ್ತಾನೆ. ಅದರಂತೆಯೇ ಮಾನವನೂ ಸಹ ಹಿರಿಯರ ಉಪದೇಶಗಳನ್ನು
ಸ್ಮರಣೆಗೆ ತಂದುಕೊಂಡು ಈ ದೇಹವು ಅಶಾಶ್ವತವೆಂದು ಅರಿತು ತನ್ನನ್ನೇ ಆಶ್ರಯಿಸಿ
ನಂಬಿಕೊಂಡಿರುವ ಸಜ್ಜನರಿಗೆ. ದೀನದಲಿತರಿಗೆ ಉದಾರವಾಗಿ ಸಹಾಯವನ್ನುಮಾಡಿ
ಆಚಂದ್ರಾರ್ಕವಾಗಿ ಕೀರ್ತಿಯನ್ನು ಪಡೆಯಲಿಕ್ಕಾಗಿಯೇ ಸದ್ವಿದ್ಯೆ, ಭಕ್ತಿ ಜ್ಞಾನ,
ವೈರಾಗ್ಯದ ಮೂಲಕ ಪರಮಪದವನ್ನು ಪಡೆಯುವುದೇ ಮಾನವನಾಗಿ ಜನ್ಮ ತಾಳಿ
ದಮೇಲೆ ಮಾಡಬೇಕಾದ ಆದ್ಯ ಕರ್ತವ್ಯವಾಗಿರುತ್ತೆ, ಎಂಬುದಾಗಿ ಗುರು ಹಿರಿಯರ
ವಾಣಿಯಾಗಿದೆ.

ಸ್ವಾತಿ ಮಳೆಯ ಹನಿಗಳು ಮಾನವನ ಶರೀರಾರೋಗ್ಯಕ್ಕೆ ಉಪಯೋಗಿಸಬಹು
ದಾದ ಅತಿ ಶ್ರೇಷ್ಠವಾದುದೂ, ದಿವ್ಯ ಶಕ್ತಿಯನ್ನು ಹೊಂದಿರುವಂಥಾದ್ದಾಗಿ ಆರೋ
ಗ್ಯಕ್ಕೆ ಒಂದು ವರಪ್ರದಾನವಾಗಿ ಪರಮಾತ್ಮನಿಂದ ದತ್ತವಾಗಿರುತ್ತೆ ಇದರ ಉತ್ಪತ್ತಿ



ಎಂದರೆ ಮಳೆಗಳಲ್ಲೆಲ್ಲಾ ಸ್ವಾತಿ ಮಳೆಯೇ ಏಕೆ ಶ್ರೇಷ್ಠವೂ, ಪ್ರಭಾವಯುತವೂ
ಆಗಿರುತ್ತೆ ? ಮತ್ತು ಈ ಮಳೆಯು ಪ್ರಾರಂಭವಾದಾಗಿನಿಂದ ಹನ್ನೆರಡು ದಿನಗಳು
ನಾಲ್ಕು ಪಾದಗಳೂ ಪೂರೈಸುವಷ್ಟರಲ್ಲಿ ಇದರ ಮೋಡಗಳ ರಚನೆ ಮತ್ತು ಅವು
ಗಳಲ್ಲಿ ಕಂಡುಬರುವ ವಿಶೇಷ ಲಕ್ಷಣಗಳು ಮುಂತಾದುವುಗಳ ವಿಚಾರವಾಗಿ ಮತ್ತು
ಈ ಸ್ವಾತಿ ಮಳೆಯು ಎಲ್ಲಿ ಹೇಗೆ ಉತ್ಪತ್ತಿಯಾಗುತ್ತೆಂಬ ಇನ್ನೂ ಅನೇಕ ಮೂಲ
ವಿಚಾರಗಳು ಇದ್ದಾಗ್ಯೂ ಅದನ್ನು ವರ್ಣನೆ ಮಾಡಲು ನನಗೆ ಶಕ್ತಿಯಿಲ್ಲ. ಕೆಲವು
ಬಲ್ಲ ಹಿರಿಯರು ಈ ಸ್ವಾತಿ ಮಳೆಯನ್ನು "ದೇವಗಂಗೆ" ಯೆಂದು ಉಚ್ಚರಿಸು
ತ್ತಾರೆ, ಇವೆಲ್ಲವೂ ಈಗಿನ ಕಾಲದವರಿಗೆ ಸುಮ್ಮನೆ ಪುರಾಣವೇ ಹೊರತಾಗಿ ನಿಜ
ಸಂಗತಿಯಾಗಿಲ್ಲವೆಂಬ ಭಾವನೆಯಿಂದ ನಮ್ಮ ಪೂರ್ವೀಕರು ಅನುಭವಗಳನ್ನು ಪಡೆದು
ಅವುಗಳ ಯಥಾರ್ಥ ಸ್ವರೂಪಗಳನ್ನು ಪುರಾತನ ಋಷಿಗಳೂ, ಜ್ಞಾನಿಗಳೂ, ತಪ
ಸ್ವಿಗಳೂ, ಗೋಸಾಯಿಗಳೂ ವಿವರಿಸಿ ನಮ್ಮೆಲ್ಲರ ಮುಂದೆ ಇಟ್ಟಿದ್ದಾಗ್ಯೂ ಸಹ ಈಗಿನ
ವಿಜ್ಞಾನಿಗಳಾದವರು ಇವುಗಳ ಕಡೆಗೆ ಗಮನವಿಲ್ಲದೆ ಹಿರಿಯರು ಮಾರ್ಗದರ್ಶನ
ಮಾಡಿರುವುವುಗಳನ್ನು ಶೋಧನೆ ಮಾಡಿ ಪರೀಕ್ಷಿಸಲು ಹೊರಟಿದ್ದಾರೆಯೇ ಹೊರ
ತಾಗಿ ತಾವು ಹೊಸದಾಗಿ ಕಂಡುಹಿಡಿದುದು ಮಾತ್ರ ಯಾವುದೂ ಕಾಣುತ್ತಿಲ್ಲ.
ಇವರೆಲ್ಲರೂ ಎಂದರೆ ಈಗ ನಾನು ಕಂಡುಹಿಡಿದೆನೆಂದು ಹೇಳಿಕೊಳ್ಳುವ ವಿಜ್ಞಾನಿ
ಗಳೆಂದು ಕರೆಯಿಸಲ್ಪಡುತ್ತಿರುವವರು ಹಳೆಯದನ್ನು ಎಂದರೆ ನಮ್ಮ ಹಿರಿಯರು ಮಾಡಿ
ಬಿಟ್ಟಿರುವುದನ್ನು ಪುನರಾವರ್ತನೆ ಮಾಡುತ್ತಿರುವರೆಂದೇ ನಿರ್ಧರಿಸಬಹುದಾಗಿದೆ.

ಸ್ವಾತಿ ಮಳೆಯು ಭೂಮಿಯಮೇಲೆ ಬಿದ್ದನಂತರ ಭೂಮಿಯಲ್ಲಿ ಎಂದರೆ ಕಲ್ಲಿನ
ಜೊತೆಯಲ್ಲಿ ದೊರಕುವ ಚಿನ್ನದ ಅದುರೂ ಶುದ್ಧ ಬಂಗಾರವಾಗುತ್ತದೆ ಅಪಾರ ಶಕ್ತಿ
ಯನ್ನು ಪಡೆದಿರುವ ಮೂಲಿಕೆಗಳೆಲ್ಲಕ್ಕೂ ಸಹ ಈ ಮಳೆಯೇ ಆಧಾರವಾಗಿರುತ್ತದೆ,
ಇವುಗಳಲ್ಲಿ ಅತಿ ಮುಖ್ಯವಾದ ಮೂಲಿಕೆಗಳೆಂದರೆ, ಕೆಂಪು ಚಿತ್ರಮೂಲ, ಕೆಂಪು
ಲೋಳಿಸರ, ಕೆಂಪು ದೊಡ್ಡ ಪತ್ರೆ, ಕಾಡುಹಳದ ಗೆಡ್ಡೆ, ಅರ್ಧನಾರೀಶ್ವರ ಗೆಡ್ಡೆಗಳಿಗೂ
ಸಹ ಈ ಮಳೆಯೇ ಮುಖ್ಯ ಆಧಾರವಾಗಿದೆ. ಇನ್ನೂ ಇಂತಹ ಮಹತ್ತಾದ ಶ್ರೇಷ್ಠ
ವಾದ ಮೂಲಿಕೆಗಳೆಂದರೆ, ತೇಲಿಯಾಗಂಜ್, ಪೇತ್‌ರಕರೆ, ಅಡ್ಡಾಯಿಪನ್ನ, ರರ್ವ,
ಉಗಿ, ಭರ್ಗಭೂಚಿ, ಕಠಾರಿ, ರುದಂತಿಕಾ, ಹೇಮಮಾಲಿನಿ ಎಂಬ ಈ ಒಂಬತ್ತು
ಅತಿ ಮುಖ್ಯವಾದ, ಅಮೂಲ್ಯವಾದ, ಅತಿ ಗೋಪ್ಯವಾದ ಮತ್ತು ಅತಿ ಮಹತ್ತಿನಿಂದ
ಕೂಡಿರುವ ಮೂಲಿಕೆಗಳಾಗಿವೆ.

ಪ್ರಪಂಚದಲ್ಲಿ ವಿದ್ಯೆಯೇ ದೊಡ್ಡದೇ ಹೊರತು ಹಣವು ದೊಡ್ಡದಲ್ಲವೆಂದು
ಹಿರಿಯರು ಹೇಳಿದ್ದಾರೆ, ಇತರರನ್ನು ಯಾಚಿಸದೆ ಪರಮಾತ್ಮನ ಸ್ಮರಣೆಯಲ್ಲೇ ಸದಾ
ಕಾಲವನ್ನು ಕಳೆಯುತ್ತಾ ಮಾನವನು ತಾನು ಅನಾಯಾಸ ಮರಣವನ್ನು ಈ ಧ್ಯಾನ

ದಲ್ಲೇ ಪಡೆಯಬೇಕಾದುದೇ ಮಾನವನಾಗಿ ಜನಿಸಿ ಮಾಡಬೇಕಾದ ಜನ್ಮಕರ್ತವ್ಯ
ವೆಂದು ಹೇಳಿರುತ್ತಾರೆ. ಅದಕ್ಕಾಗಿಯೇ ಹಿರಿಯರು "ಬಿನಾದೈನ್ಯೇನ ಜೀವನಂ, ಸದಾ
ನಾಮಸ್ಮರಣಂ, ಅನಾಯಾಸ ಮರಣಂ" ಎಂಬುದಾಗಿ ಸಾರಿ ಹೇಳಿದ್ದಾರೆ, ಗುರು
ವಿನಿಂದ ವಿದ್ಯೆಯನ್ನು ಪಡೆಯುವ ಶಿಷ್ಯನು, ಕುಶಾಗ್ರಮತಿಯಾಗಿರಬೇಕು, ಉತ್ಸಾ
ಹಪೂರಿತನಾಗಿರಬೇಕು, ಶ್ರದ್ಧೆ, ಭಕ್ತಿಗಳಿಂದ ಪ್ರೇರಿತನಾಗಿರಬೇಕು, ಆಗ ಮಾತ್ರ
ಗುರುವಿನ ಹೃದಯದಲ್ಲಿರುವ "ಜ್ಞಾನಾಮೃತ" ವು ಶಿಷ್ಯನ ಉದ್ಧಾರಕ್ಕೆ ನಿರರ್ಗಳ
ವಾಗಿ ಹರಿಯುವುದು, ಭೂಗರ್ಭದಲ್ಲಿರುವ ರಸ ಸೀಸ, ತಾಮ್ರ, ಗಂಧಕ, ಬೆಳ್ಳಿ,
ಕಬ್ಬಿಣ, ವಂಗ ಮುಂತಾದ ನವ ಲೋಹಗಳಲ್ಲಿಯೂ ರಸೋತ್ಪತ್ತಿಯಾಗಿ ಈ ಸ್ವಾತಿ
ಮಳೆಯು ಬಿದ್ದನಂತರ ಭೂಗರ್ಭದಲ್ಲಿಯೇ ಒಂದಕ್ಕೊಂದು ಮೂಲಿಕೆಗಳ ಸತ್ವ
ಪ್ರಭಾವದಿಂದ ಕಲ್ಲಿನ ಪದರಗಳಲ್ಲಿ ಭೂಗರ್ಭದ ಶಾಖವೇ ಪುಟವಾಗಿ ಪರಿಣಮಿಸಿ
ಬಂಗಾರವು ತಯಾರಾಗುವ ಈ ಪರಮಾತ್ಮನ ಸೃಷ್ಟಿ ವೈಚಿತ್ರ್ಯವನ್ನು ವರ್ಣಿಸಲು
ಅಸಾಧ್ಯವಾದುದಾಗಿದೆ, ಮತ್ತು ವಜ್ರದ ಕಲ್ಲನ್ನು ತಯಾರಿಸಲು ಅಗತ್ಯವಾದ ಅಭ್ರ
ಕದ ರಸ ಉತ್ಪತ್ತಿಯು ಈ ಸ್ವಾತಿ ಮಳೆಯಿಂದಲೇ ಉಂಟಾಗುತ್ತದೆ.

ನಾವು ತಿನ್ನುವ ಸಮುದ್ರದ ಉಪ್ಪನ್ನು ಹರಳು ಹರಳಾಗಿಯೇ (ಮೂರು
ಏಣಿನ ಮಂಗರಬಳ್ಳಿ) ಏಕ ಮೂಲಿಕೆಯಲ್ಲಿ ಕಟ್ಟಿ ಸಿಂಧೂರವನ್ನಾಗಿ ಮಾಡಿ ಆ
ಉಪ್ಪು ಕಟ್ಟಿನ ಹರಳನ್ನು ಕೆಂಡದ ಮೇಲೆ ಇಟ್ಟರೆ ಬೆಣ್ಣೆಯಂತೆ ಕರಗಿ ನೀರಾಗಿ
ಹರಿದು ಹೋಗುವುದು, ಮತ್ತು ಇದೇ ಉಪ್ಪು ಕಟ್ಟಿನ ಹರಳನ್ನು ಸ್ವಾತಿಮಳೆ ನೀರಿ
ನಲ್ಲಿ ಮೂರು ದಿನ ಹಾಕಿ ಇಟ್ಟಿದ್ದರೂ ಸಹ ಕರಗದೆ ತೂಕವು ಕಡಿಮೆಯಾಗದಂತೆ
ತಯಾರಿಸಲು ಅಗತ್ಯವಾದ ಈ ಏಕ ಮೂಲಿಕೆಯೂ ಸಹ ಈ ಸ್ವಾತಿಮಳೆಯು
ಬಿದ್ಧ ನಂತರವೇ ಹೆಚ್ಚು ಶಕ್ತಿಯನ್ನು ಪಡೆಯುತ್ತದೆ.

ಇನ್ನೂ ಇದರ ಪ್ರಭಾವವೆಂದರೆ ದೇವ ಮೂಲಿಕೆಗಳಲ್ಲಿ ಒಂದಾದ ಬಿಳಿ ಮುತ್ತು
ಗವೂ ಸಹ ಈ ಸ್ವಾತಿ ಮಳೆಯು ಬಿದ್ದನಂತರವೇ ತನ್ನ ಪಂಚ ಅಂಗಗಳಲ್ಲೂ ರಸ
ಭರಿತವಾಗಿ ಹೆಚ್ಚು ಶಕ್ತಿಯನ್ನು ಪಡೆದು ಮಾನವನಿಗೆ ಭೂಲೋಕದ ಕಲ್ಪವೃಕ್ಷ
ವಾಗಿರುತ್ತೆ, ಇದರ ಎಲೆಗಳಿಂದ, ಹೂವಿನಿಂದ, ಕಡ್ಡಿಯಿಂದ, ಬೀಜ, ಬೇರು ಈ
ಐದರಿಂದಲೂ ಒಂದೊಂದರಲ್ಲಿ ಒಂದೊಂದು ವಿಧವಾಗಿ ಔಷಧಿಯನ್ನು ತಯಾರಿಸಿ
ಕೊಂಡು ಸೇವಿಸಿದರೆ ಆರೋಗ್ಯ ದೃಢಕಾಯರಾಗಬಹುದೆಂದೂ ; ಆಕಾಶಗಮನ
ವನ್ನೂ ಪಡೆಯಬಹುದೆಂದೂ, ಭೂಮಿಯಲ್ಲಿನ ದ್ರವ್ಯಗಳನ್ನೂ ಕಾಣಬಹುದೆಂದೂ,
ಮಹಾಬಲಶಾಲಿಯಾಗಿ ಆಯುವೃದ್ಧಿಯನ್ನು ಪಡೆಯಬಹುದೆಂದೂ, ಅತಿ ಅಮೂಲ್ಯ
ವಾದುದಾಗಿ ಈ ಬಿಳಿ ಮುತ್ತುಗವು ಮಾನವನಿಗೆ ಕಲ್ಪವೃಕ್ಷವಾಗಿ ಪ್ರಕಾಶಿಸುವಂಥಹ
ದಿವ್ಯಶಕ್ತಿಯು ಈ ಸ್ವಾತಿ ಮಳೆಯಿಂದಲೇ ಉಂಟಾಗುವುದೆಂದು ನನ್ನ ಗುರುಗಳು



ಉಪದೇಶಿಸಿರುತ್ತಾರೆ, ಈ ಸ್ವಾತಿ ಮಳೆಯು ಸರ್ವ ಮೂಲಿಕೆಗಳಿಗೂ, ಮಾನವನಿಗೂ
ಸಹ ಪ್ರಾಣಾಧಾರವಾಗಿದೆ.

ಈ ಸ್ವಾತಿ ಮಳೆಯ ಹನಿಯನ್ನು ನೇರವಾಗಿ ಪಾತ್ರೆಗೆ ಹಿಡಿಯಬೇಕು. ಹಿಡಿದ
ನೀರನ್ನು ಮಡಕೆಯಲ್ಲಿಟ್ಟರೆ ಕೆಲವು ದಿನಗಳ ನಂತರ ಅದರಲ್ಲಿ ನೀರು ಇಲ್ಲದಂತಾಗು
ತ್ತದೆ. ಗಾಜಿನ ಸೀಸೆಯಲ್ಲಿ ಹಾಕಿ ಅನುಪಾನಗಳನ್ನು ಇದಕ್ಕೆ ಹಾಕಿ (ಅನುಪಾನ
ಮುಂದೆ ವಿವರಿಸಲಾಗಿದೆ) ಒಂದೆರಡು ದಿನ ಬಿಸಿಲಿನಲ್ಲಿಟ್ಟು ನಂತರ ಭದ್ರಪಡಿಸಿ ತೆಗೆ
ದಿಟ್ಟುಕೊಳ್ಳಲು ಎಷ್ಟು ದಿನಗಳಾದರೂ ಇರುತ್ತದೆ, ಹಾಗೆಯೇ ಇಟ್ಟಲ್ಲಿ ವಾಸನೆ
ಬರುತ್ತೆ.

ಈ ಸ್ವಾತಿ ಮಳೆಯು ಬಿದ್ದಾಗ ಭೂಮಿಯಲ್ಲಿನ ದಿಕ್ಕು ದಿಕ್ಕಿಗೆ ಹರಿಯುವ
ಒಳ ಜಲಗಳೆಲ್ಲಾ ಏಕಮುಖವಾಗಿ ಅತಿ ಹೆಚ್ಚಾದ ಥಂಡಿಯನ್ನು ಉಂಟುಮಾಡು
ತ್ತದೆ.

**ಒಂದನೇ ಪಾದ :—** ಒಂದನೇ ಪಾದದ ಸ್ವಾತಿ ಮಳೆಯ ಹನಿಗಳನ್ನು ಮೋಡ
ದಿಂದ ನೇರವಾಗಿ ಬೀಳುವ ಹನಿಗಳನ್ನೇ ಒಂದು ಪಾತ್ರೆಯಲ್ಲಿ ಹಿಡಿದು ಇಟ್ಟುಕೊಳ್ಳ
ಬೇಕು, ಇದೇ ರೀತಿಯಾಗಿ ನಾಲ್ಕು ಪಾದಗಳ ಮಳೆಯ ನೀರನ್ನೂ ಹಿಡಿದು ಬೇರೆ
ಬೇರೆ ದೊಡ್ಡ ದೊಡ್ಡ ಗಾಜಿನ ಸೀಸೆಗಳಲ್ಲಿ ಇಟ್ಟುಕೊಳ್ಳಬೇಕು, ಈ ಒಂದನೇ ಪಾದದ
ನೀರಿನಿಂದ ಉಪ್ಪುಗಳನ್ನು ಕಟ್ಟಿಕೊಳ್ಳಬಹುದು, ಇದೇ ನೀರನ್ನು ಔಷಧ ರೂಪದಲ್ಲೂ
ಉಪಯೋಗಿಸಿಕೊಳ್ಳಬಹುದು, ರಸಬದ್ಧವನ್ನೂ ತಯಾರಿಸಬಹುದು, ಎಂದರೆ ಸಮುದ್ರ
ದಲ್ಲಿ ಸ್ವಾತಿ ಮಳೆಯ ಕಾಲದಲ್ಲಿ ಕಪ್ಪೆಚಿಪ್ಪುಗಳು ಎಲ್ಲವೂ ಬಾಯಿ ತೆರೆದುಕೊಂಡಿರು
ವಾಗ ಈ ಸ್ವಾತಿಯ ಹನಿ ಎಷ್ಟು ಹನಿ ಬೀಳುತ್ತವೆಯೋ ಅಷ್ಟೂ ಶ್ರೇಷ್ಠವಾದ
ಮುತ್ತುಗಳಾಗುತ್ತವೆ, ಮತ್ತು ಹನಿಗಳು ಎಷ್ಟು ಗಾತ್ರದ ಹನಿ ಬೀಳುತ್ತವೆಯೋ
ಅಷ್ಟೇ ಗಾತ್ರದ ಮುತ್ತುಗಳಾಗುತ್ತವೆ, ಎಂದರೆ ಬಾಯಿಬಿಟ್ಟಿದ್ದ ಚಿಪ್ಪುಗಳು ಈ ಸ್ವಾತಿ
ಹನಿಗಳಿಂದ ತುಂಬಿದ ಕೂಡಲೇ ಬಾಯಿ ಮುಚ್ಚಿಕೊಂಡು ಸಮುದ್ರದ ತಳಕ್ಕೆ
ಹೋಗುತ್ತವೆ, ಈ ಸ್ವಾತಿ ಮಳೆಯ ಉಪಯೋಗ ಮತ್ತು ಅನುಭವಗಳಿಂದ ಬಹಳ
ಆಶ್ಚರ್ಯವೂ ಮತ್ತು ಮಹತ್ತಾದುವೂ ಆಗಿರುತ್ತದೆ.

**ಎರಡನೇ ಪಾದ :—** ಈ ಎರಡನೇ ಪಾದದ ಸ್ವಾತಿ ಮಳೆಯ ನೀರನ್ನು
ಪ್ರತ್ಯೇಕವಾಗಿ ಹಿಂದೆ ಹೇಳಿರುವ ಪ್ರಕಾರ ಶೇಖರಿಸುವುದು. ಈ ಮಳೆ ನೀರಿನಿಂದ
ಸಕಲ ರಸ ಪಾಷಾಣಗಳನ್ನೂ ಕಟ್ಟಿಕೊಳ್ಳಬಹುದು, ಒಂದೇ ಒಂದು ಪುಟದಲ್ಲಿ ಕಟ್ಟಿ
ಕೊಂಡು ಅಗ್ನಿಯಲ್ಲಿ ಜೀವಂತವಾಗಿ ಪಡೆಯಬಹುದು, ಮತ್ತು ನಮ್ಮ ಅನುಭವದ
ಮೇರೆಗೆ ಔಷಧಿಗಳನ್ನು ತಯಾರಿಸಬಹುದಾಗಿರುತ್ತೆ.

ಮೂರನೇ ಪಾದ :—ಮೂರನೇ ಪಾದದ ಸ್ವಾತಿ ಮಳೆಯ ನೀರನ್ನೂ ಸಹ
ಮೇಲಿನ ಪ್ರಕಾರ ಹಿಡಿದಿಟ್ಟುಕೊಂಡು, ಇದರಿಂದ ಸರ್ವ ಲೋಹಗಳನ್ನೂ ಶುದ್ಧಿ
ಮಾಡಿಕೊಂಡು, ಔಷಧಿಗಳನ್ನೂ, ಭಸ್ಮಗಳನ್ನೂ, ಸಿಂಧೂರಗಳನ್ನೂ ತಯಾರಿಸ
ಬಹುದು, ನಮ್ಮ ಅನುಭವದಂತೆ ತಯಾರಿಸಬಹುದಾದ ಶ್ರೇಷ್ಠ ಗುಣವನ್ನು
ಹೊಂದಿರುವಂಥಾದ್ದಾಗಿರುತ್ತೆ, ಇದರಿಂದಲೂ, ಮತ್ತು ಒಂದು, ಎರಡನೇ ಪಾದಗಳ
ಜಲದಿಂದಲೂ ಅಬ್ಜಗಳನ್ನು ನಮ್ಮ ಅನುಭವದ ಮೇರೆಗೆ ತಯಾರಿಸಬಹುದು, ಮತ್ತು
ಜಯ ನೀರನ್ನೂ ಸಹ ತಯಾರಿಸಬಹುದು.

ನಾಲ್ಕನೇ ಪಾದ :- ನಾಲ್ಕನೇ ಪಾದದ ಸ್ವಾತಿ ಮಳೆಯ ನೀರನ್ನು ಕ್ಷೇಮದ
ಮಳೆಯೆಂದು ಅನುವಂಶಿಕ ಆಯುರ್ವೇದ ವೈದ್ಯರುಗಳಾದ ನಾವುಗಳು ಹೇಳುತ್ತೇವೆ,
ಎಂದರೆ ಯಾವ ರೋಗಕ್ಕೆ ಆಗಲಿ ಇದು ಬಹಳ ಶ್ರೇಷ್ಠವಾದುದು. ಆದರೂ
ನಾಲ್ಕು ಪಾದಗಳ ನೀರನ್ನೂ ಬೇರೆ ಬೇರೆ ಇಟ್ಟುಕೊಂಡು ಅನುಪಾನ ವಿಶೇಷದಿಂದ
ಉಪಯೋಗಿಸಿದರೆ ಸರ್ವ ರೋಗ ನಿವಾರಣೆಯಾಗುತ್ತವೆ.

ಸಕ್ಕರೆ ಖಾಯಿಲೆ ಸ್ವರೂಪ :- ಸಕ್ಕರೆ ಕಾಯಿಲೆಯು ಭಾರತಕ್ಕೆ ಹೊಸ
ರೋಗವಲ್ಲ, ಪ್ರಾಚೀನ ಕಾಲದಿಂದಲೂ ಮಾನವನ ಕುಲದೊಡನೆ ಬೆಳೆದು ಬಂದಿರು
ವುದೆಂದು ಅನೇಕ ಆಧಾರಗಳಿವೆ, ಈ ರೋಗದಿಂದ ನರಳುತ್ತಿರುವವರ ಸಂಖ್ಯೆಯು
ವಿಶ್ವದಲ್ಲಿ ಹೆಚ್ಚಾಗಿದೆ, ಈ ರೋಗವು ಅನುವಂಶಿಕವಾಗಿಯೂ ಗೋಚರಿಸುತ್ತದೆ,
ಮತ್ತು ಅತಿತೆಗೆಟ್ಟ ಆಹಾರ ಸೇವನೆ, ದೈಹಿಕ ಶ್ರಮವಿಲ್ಲದ ಜೀವನ, ಈ ರೋಗದ
ಬೆಳವಣಿಗೆಗೆ ಉತ್ತೇಜನವಾಗಿದೆ, ಈ ರೋಗವನ್ನು ಉಂಟುಮಾಡುವ ಮುಖ್ಯವಾ
ದುದು ಇನ್ಸುಲಿನ್ ಕೊರತೆ.

ಸಕ್ಕರೆ ಕಾಯಿಲೆಯು ಮೂತ್ರವಷ್ಟೇ ಸಿಹಿಯಲ್ಲ, ದೇಹವೂ ಸಿಹಿಯಾಗಿರು
ತ್ತದೆ, ಶಕ್ತಿ ಹೀನತೆ, ಒಣಗಿದ ಗಂಟಲು ಶರೀರ ತೂಕದ ಇಳುವರಿ, ಮುಸುಕಾದ
ದೃಷ್ಟಿ, ತಂಪಾದ ಆಹಾರ ಪದಾರ್ಥಗಳ ಮೇಲೆ ಬಹಳ ಆಸಕ್ತಿ, ವಿಶ್ರಾಂತಿ ಬಯಕೆ,
ಬಾಯಲ್ಲಿ ಸಿಹಿರುಚಿ, ಹಸ್ತ ಪಾದಗಳಲ್ಲಿ ಉರಿ, ಬೇಗ ಮಾಯದ ಹುಣ್ಣುಗಳು,
ಆಗಾಗ್ಗೆ ಮೂತ್ರ ವಿಸರ್ಜನೆ, ರಾತ್ರಿ ವೇಳೆಯಲ್ಲಿ ಹೆಚ್ಚಾಗಿ ಮೂತ್ರ ಆಗುವಿಕೆ.
ಇವುಗಳಲ್ಲದೆ, ಗರ್ಭಪಾತ, ಹೆರಿಗೆಯ ತೊಂದರೆಗಳು, ಹೆಚ್ಚು ತೂಕದ ಕೂಸುಗಳಿಗೆ
ಜನ್ಮ ನೀಡುವಿಕೆ ಇವುಗಳು ಸಕ್ಕರೆ ರೋಗದ ಮುಖ್ಯ ಗುಣಲಕ್ಷಣಗಳಾಗಿವೆ. ಈ
ಕಾಯಿಲೆಯು ಹೆಂಗಸರಿಗಿಂತ ಗಂಡಸರಲ್ಲಿಯೇ ಹೆಚ್ಚಾಗಿ ಕಾಣುತ್ತದೆ.

ಬೊಜ್ಜಿನಿಂದ ಸ್ಥೂಲ ದೇಹ ಹೊಂದಿದ ವ್ಯಕ್ತಿಗಳು ತಮ್ಮ ಊಟ, ಉಪ
ಚಾರದಲ್ಲಿ ಶಿಸ್ತಿಗೊಳಪಡದೆ ಇರುವುದರಿಂದ ಬೊಜ್ಜನ್ನು ಇಳಿಸಿಕೊಳ್ಳುವ ಗೋಜಿಗೆ



ಹೋಗುವುದಿಲ್ಲ. ಈ ರೋಗದ ಬೆಳವಣಿಗೆಗೆ ದೈಹಿಕ ಬೇಡಿಕೆಗಿಂತ ಹೆಚ್ಚು ಆಹಾರ
ಸೇವನೆ, ದೈಹಿಕ ಚಟುವಟಿಕೆಯಿಲ್ಲದ ಜೀವನ.

ಹಸಿವಿನಿಂದ ಪ್ರಪಂಚದಲ್ಲಿ ಕೆಲವರು ಮಾತ್ರ ಸತ್ತರೆ, ಹೆಚ್ಚು ಜನರು ಹೆಚ್ಚು
ಹೆಚ್ಚು ತಿಂದು ಸಾಯುತ್ತಿರುವುದರಲ್ಲಿ ಅತಿಶಯವೇನೂ ಇಲ್ಲ.

ನಾವು ಸೇವಿಸುವ ಆಹಾರವು, ಪ್ರೋಟೀನ್‌ನಂತಹ ದೇಹ ಕಟ್ಟುವ ವಸ್ತು,
ಶಕ್ತಿಯನ್ನು ನೀಡುವ ಶರ್ಕರ ಪಿಷ್ಟ, ಮತ್ತು ಕೊಬ್ಬು, ಪೋಷಕದ್ರವ್ಯಗಳಾದ
ಜೀವಸತ್ವಗಳು ಮತ್ತು ಖನಿಜ ಲವಣಗಳು ಹಾಗೂ ನೀರನ್ನೂ ಒಳಗೊಂಡಿದೆ.
ದೇಹವು ತನ್ನಲ್ಲಿದ್ದ ಸಕ್ಕರೆಯನ್ನು ಉಪಯೋಗಿಸಿಕೊಳ್ಳಲು ಅಸಮರ್ಥವಾಗಿ
ದೈಹಿಕ ಕೋಶಗಳ ಆಹಾರ ಬೇಡಿಕೆಯು ಹೆಚ್ಚಾಗಿ ಸೇರಿಸಿಕೊಳ್ಳುವುದರಿಂದ ಹಸಿವು
ಹೆಚ್ಚಾಗಿ ಬಾಯಾರಿಕೆ ಉಂಟಾಗಿ ಪದೇ, ಪದೇ ನೀರನ್ನು ಕುಡಿಯುಬೇಕಾಗುವುದು.
ಸಕ್ಕರೆ ಕಾಯಿಲೆಯು ೪೦ ವರ್ಷದ ವಯಸ್ಸಿನವರಿಂದ ೫೦ ವರ್ಷದ ವಯಸ್ಸಿ
ನವರೆಗೆ ಗೋಚರಿವಾಗುತ್ತದೆ. ಅನುವಂಶಿಕದವರ ಪ್ರಭಾವ ಸಾಕಷ್ಟಿದ್ದರೆ, ಈ
ರೋಗವು ತೀರ ಎಳೆತನದಲ್ಲಿಯೇ ಗೋಚರಿಸುವ ಸಾಧ್ಯತೆ ಇದೆ.

ಸಕ್ಕರೆ ಖಾಯಿಲೆಗೆ :- ೧) ಕಹಿ ಜೀರಿಗೆ ೧೦೦ ಗ್ರಾಂ, ಜಂಬುನೇರಳೆ ಬೀಜ
೧೦೦ ಗ್ರಾಂ, ಮಧುನಾಶಿನಿ ೧೦೦ ಗ್ರಾ, ( ಇದು ಗ್ರಂಥಿಗೆ ಅಂಗಡಿಯಲ್ಲಿ ದೊರೆ
ತ್ತದೆ). ಈ ಮೂರು ವಸ್ತುಗಳನ್ನು ಒಂದು ದಿನ ಬಿಸಿಲಿನಲ್ಲಿ ಒಣಗಿಸಿ, ಕುಟ್ಟಿ
ಚೂರ್ಣಮಾಡಿ, ವಸ್ತ್ರದಿಂದ ಶೋಧಿಸಿಕೊಂಡು ಒಂದು ಗಾಜಿನ ಶೀಷೆಯಲ್ಲಿ ಇಟ್ಟು
ಕೊಳ್ಳಬೇಕು. ಒಂದನೇ ದಿನದಿಂದ ೧೨ ದಿನಗಳವರೆಗೂ ಒಂದನೇ ಪಾದದ ಸ್ವಾತಿ
ನೀರು ೬ ಚಮಚ, ೬ ಚಮಚ ಅಕ್ಕಿ ತೊಳೆದ ನೀರು, ೧ ಚಮಚ ಜೇನು, ½
ಚಮಚ ಮೇಲ್ಕಂಡ ಚೂರ್ಣಕ. ಇವುಗಳನ್ನು ಒಂದು ಲೋಟಕ್ಕೆ ಹಾಕಿ ಚೆನ್ನಾಗಿ
ಕಲಸಿ ಕುಡಿಯುಬೇಕು. ೧೨ ದಿನ ಕಳೆದ ಮೇಲೆ ೧೩ ನೇ ದಿನದಿಂದ ೨ ನೇ
ಪಾದದ ಸ್ವಾತಿ ನೀರು, ೨೫ ನೇ ದಿನದಿಂದ ೩ ನೇ ಪಾದದ ಸ್ವಾತಿ ನೀರು ೩೭
ನೇ ದಿವಸದಿಂದ ೪ ನೇ ಪಾದದ ನೀರು, ಇವುಗಳ ಜೊತೆಯಲ್ಲಿ ಮೇಲ್ಕಂಡ
ಚೂರ್ಣವನ್ನು ಬೆರಸಿ ಕುಡಿಯುತ್ತಾ ಬಂದರೆ ಇದರ ಗುಣ, ನಾನು ಇಲ್ಲಿ ಹೇಳ
ಬೇಕಾದುದೇನೂ ಇಲ್ಲ. ಸಕ್ಕರೆ ಖಾಯಿಲೆಯವರಿಗೇ ಅನುಭವವಾಗುತ್ತೆ, ಒಟ್ಟು
೪೮ ದಿವಸಗಳು ಉಪಯೋಗಿಸಬೇಕು, ದಿನ ೧ ಕ್ಕೆ ಒಂದುವೇಳೆ ಮಾತ್ರ ಬೆಳಗಿನ
ಹೊತ್ತು.

೨) ಶರೀರದ ತೂಕ ಕಡಿಮೆಯಾಗಬೇಕಾದರೆ, ಸ್ವಾತಿ ಮಳೆ ನೀರು ೬
ಚಮಚ, ೬ ಚಮಚ ಅಕ್ಕಿ ತೆದಳೆದ ನೀರು, ಈ ಎರಡನ್ನು ಪ್ರತಿನಿತ್ಯ ಬೆಳಗಿನ

ಹೊತ್ತು ಕುಡಿಯುತ್ತಾ ಬಂದರೆ ಶರೀರದ ತೂಕ ಕಮೆಯಾಗುತ್ತೆ. ಇದಕ್ಕೆ ೪ ನೇ ಪಾದದ ಸ್ವಾತಿ ಮಳೆ ನೀರು ಸಾಕು.

೩) ರಕ್ತವಾಂತಿ, ರಕ್ತಭೇಧಿ, ಅಥವಾ ಬಾಯಿನ ಒಳಭಾಗದ ಹುಣ್ಣು, ಹಲ್ಲಿನಲ್ಲಿ ಮೂಗಿನಲ್ಲಿ ರಕ್ತ ಬೀಳುತ್ತಿದ್ದರೆ, ಸ್ವಾತಿ ಮಳೆ ೪ ನೇ ಪಾದದ ನೀರನ್ನು ಸ್ವಲ್ಪ ನೆತ್ತಿಗೆ ತಟ್ಟಿ, ೬ ಚಮಚ ನೀರು, ೧ ಚಮಚ ಜೇನು ಸೇರಿಸಿ ದಿನ ೧ ಕ್ಕೆ ೩ ವೇಳೆ ಕುಡಿಯುತ್ತಾ ಬಂದರೆ ಗುಣವಾಗುತ್ತೆ.

೪) ಲಿವರ್ ದೋಷ, ಮೇಹರೋಗದಿಂದ ಹುಟ್ಟಿರುವ ಎಲ್ಲಾ ಕಾಯಿಲೆಗಳಿಗೂ ಸಹ ನಾಲ್ಕನೇ ಪಾದದ ಸ್ವಾತಿ ನೀರು ಮಾತ್ರ ದಿನ ೧ಕ್ಕೆ ೩ ವೇಳೆ ಕುಡಿದು ಹಾಲು, ಅನ್ನ ಪಥ್ಯವಿದ್ದರೆ ಗುಣವಾಗುತ್ತೆ. ಕೆಲವಾರು ದಿನಗಳು ತೆಗೆದುಕೊಳ್ಳಬೇಕು.

೫) ರಕ್ತವತ್ತಡ, (ಬ್ಲಡ್‌ಪ್ರಶರ್) ಖಾಯಿಲೆಗೆ ( ಮುಂದಿನ ಲೇಖನದಲ್ಲಿ ಬರೆಯುತ್ತೇನೆ. )

೬) ಅನೇಕವಾಗಿ ಎಲ್ಲಾ ಖಾಯಿಲೆಯುವರೂ ಮತ್ತು ಆರೋಗ್ಯವಂತರೂ ೪ ನೇ ಪಾದದ ಸ್ವಾತಿ ನೀರು, ಅಕ್ಕಿ ತೊಳೆದ ನೀರು, ಸ್ವಲ್ಪ ಜೇನು ಸೇರಿಸಿ ಕುಡಿಯುತ್ತಾ ಬಂದರೆ ಇದರ ಗುಣ ಗೊತ್ತಾಗುತ್ತದೆ.

ಅಮೃತ ಸಮಾನವಾದ ಸ್ವಾತಿ ಮಳೆ ನೀರನ್ನು ಅಲ್ಲಗಳೆಯಬೇಡಿ, ಇದನ್ನು ಉಪಯೋಗಿಸಿ ನೋಡಿ ಇದರ ಅನುಭವ ನಿಮಗೇ ತಿಳಿಯುತ್ತದೆ.

—ಸ್ವಾತಿ ಮಳೆ ನೀರಿಗೆ ಹಾಕಿ ಭದ್ರಪಡಿಸಿ ಇಟ್ಟುಕೊಳುವುದಕ್ಕೆ ಅನುಪಾನ–

ತಿನ್ನುವ ಉಪ್ಪು, ಗವೆಸುಣ್ಣ, ಕಲ್ಲುಪ್ಪು, ಕಲ್ಲಪಟಿಕ, ದೊಡ್ಡುಪ್ಪು, ಪೆಟ್ಲುಪ್ಪು ಸ್ಫೂರ್ತಿಬೆಳೆಗಾರ, ಗಾಜು ಲವಣ, ಗಾಜುಪಟಿಕ, ಸಮುದ್ರನೊರೆ, ಅಡಿಗೆ ಸೋಡ, ಈ ೧೧ ಸಾಮಾನುಗಳನ್ನು ಒಂದೊಂದು 2¼ ಗ್ರಾಂ ನಂತೆ ಕೂಡಿಸಿಕೊಂಡು, ೧ ತೊಲ ಕೆಂಪು ಹುಣಿಸೆಹಣ್ಣನ್ನು ತಂದು ಬಲಿತ ತೆಂಗಿನಕಾಯಿ ನೀರಿನಿಂದ ಹುಣಿಸೆ ಹಣ್ಣನ್ನು ನೆನೆಹಾಕಿ. ಚೆನ್ನಾಗಿ ಕಿವುಚಿ, ಮೇಲ್ಕಂಡ ಲವಣಗಳ ಮೇಲೆ ಚಿಮಿಕಿಸಿ ಚೆನ್ನಾಗಿ ಒಣಗಿಸಬೇಕು. ನಂತರ ಲವಣಗಳನ್ನೆಲ್ಲಾ ಚೆನ್ನಾಗಿ ಕುಟ್ಟಿ ಪುಡಿ ಮಾಡಿ, ಕುಪ್ಪೆಸೊಪ್ಪಿನ ರಸವನ್ನು ಚಿಮಿಕಿಸಿ ಉಂಡೆ ಕಟ್ಟಿ ೫ ದಿನ ಬಿಸಿಲಿನಲ್ಲಿ ಒಣಗಿಸಿ ಉಂಡೆಗೆ ಕೆಮ್ಮಣ್ಣು ಬಟ್ಟೆ ಸೀಲುಮಾಡಿ ೫ ಬೆರಣಿ ಪುಟ ಹಾಕಿ, ನುಣ್ಣಗೆ ಅರೆದು ಒಂದು ಗಾಜಿನ ಸೀಸೆಯಲ್ಲಿ ಇಟ್ಟುಕೊಳ್ಳಬೇಕು, ಸ್ವಾತಿ ಮಳೆ ನೀರು ತುಂಬಿರುವ ದೊಡ್ಡ ಗಾಜಿನ ಸೀಸೆಗಳಿಗೆ ೧೦ ಗ್ರಾಂ ನಂತೆ ಈ ಪುಡಿಯನ್ನು ಹಾಕಿ ಇಟ್ಟು ಕೊಂಡರೆ, ಸ್ವಾತಿ ಮಳೆ ನೀರು ಕೆಡುವುದಿಲ್ಲ. ಈ ಅನುಪಾನದ ಪುಡಿಗೆ " ಬಿಳಿ ಪುಡಿ " ಎಂದು ಕರೆಯುತ್ತಾರೆ. ಈ ಸ್ವಾತಿ ಮಳೆ ನೀರಿನಿಂದ ಇನ್ಸುಲಿನ್ ಕೊರತೆ ನಿವಾರಣೆಯಾಗುತ್ತದೆ.

(ವೈದ್ಯ ತರಂಗಿಣಿ ಕೃಪೆ)



# ಅಸ್ಪೃಶ್ಯ ಗೃಹಸ್ಥನು ಮಠದ ಪೀಠಾಧಿಕಾರಿ

## ೧೨ನೆಯ ಶತಮಾನದ ಅಪೂರ್ವ ಕ್ರಾಂತಿ

ಹನ್ನೆರಡನೆಯ ಶತಮಾನದ ಬಸವಾದಿ ಪ್ರಮಥರು ನಡೆಸಿದ ಸಾಮಾಜಿಕ ಕ್ರಾಂತಿಯು ಪ್ರಧಾನಗುರಿ ಶೋಷಿತ ವರ್ಗದ ಉದ್ಧಾರವಾಗಿದ್ದಿತು. ಜಾತಿ ವರ್ಗಗಳ ಕೃತಕ ಸಂಕೋಲೆಯನ್ನು ಕಳಚಿ ಸಮಾಜದಲ್ಲಿ ಎಲ್ಲರಿಗೂ ಕೂಡಿ ಬಾಳುವ ಸಮಾನ ಹಕ್ಕಿದೆಯೆಂಬ ಘೋಷಣೆ ಮಾಡಿದವರು ಬಸವಾದಿ ಶರಣರು. ಮಠಗಳು ವರ್ಣ ವ್ಯವಸ್ಥೆಯ ನೆರಳಿನಲ್ಲಿ ಜಾತಿ ವರ್ಗಗಳನ್ನು ಪೋಷಿಸುತ್ತಿದ್ದಾಗ, ಈ ಸಾಮಾಜಿಕ ಅನ್ಯಾಯವನ್ನು ತಪ್ಪಿಸಲು ಸತ್ಯ, ಸದಾಚಾರ, ಸತ್‌ಶೀಲ ಸಂಪನ್ನನಾದ ಅಸ್ಪೃಶ್ಯನೊಬ್ಬನನ್ನು ಮಠದ ಉತ್ತರಾಧಿಕಾರಿಯನ್ನಾಗಿ ನೇಮಿಸಿದುದು ಹನ್ನೆರಡನೆಯ ಶತಮಾನದ ಧಾರ್ಮಿಕ ಇತಿಹಾಸದಲ್ಲಿ ಒಂದು ಅಪೂರ್ವ ದಾಖಲೆಯಾಗಿದೆ.

ಉರಿಲಿಂಗದೇವ ಈಗಿನ ಮಹಾರಾಷ್ಟ್ರದ ನಾಂದೇಡ್ ಜಿಲ್ಲೆಯ ಅವಸೆ ಕಂದಾರವೆಂಬಲ್ಲಿಯ ನಲ್ಲೂರಿ ಮಠದ ಮಠಾಧಿಪತಿಗಳಾಗಿದ್ದು ಸತಿಪತಿ ಭಾವದ ಸಾಧಕನಾಗಿ ಶರಣಸತಿ ಲಿಂಗಪತಿ ಭಾವದ ವಚನಗಳನ್ನು ಬರೆದ್ದನು. ವಚನ ಸಾಹಿತ್ಯದಲ್ಲಿ ತನ್ನ ಈ ಬಗೆಯ ವಚನಗಳಿಂದಾಗಿ ಶ್ರೇಷ್ಠದವರಲ್ಲಿ ಅಗ್ರಗಣ್ಯನಾದ ಉರಿಲಿಂಗದೇವ, ಇವನ ಶಿಷ್ಯನೇ ಪ್ರಸ್ತುತ ಉರಿಲಿಂಗಪೆದ್ದಿ. ಅನುಭಾವಿಗಳಲ್ಲಿ ಒಬ್ಬನಾಗಿರುವನು. ಮಲ್ಲಿಕಾರ್ಜುನ ಪಂಡಿತಾರಾಧ್ಯ (ಕ್ರಿ. ಶ. ೧೧೬೦) ಈ ಗುರು ಶಿಷ್ಯರ ಉಲ್ಲೇಖ ಇವರ "ಗಣಸಹಸ್ರನಾಮಾವಳಿ" ಹಾಗೂ ಪಾಲ್ಕುರಿಕೆ ಸೋಮನಾಥ(ಕ್ರಿ.ಶ. ೧೧೮೫) ಯಲ್ಲಿ ಬರುವ ಅಮರಗಣಗಳ ಪಟ್ಟಿಯಲ್ಲಿ ಬಂದಿದೆ. ಮಹಾಲಿಂಗದೇವರು (ಸು. ೧೪೨೫) ತಮ್ಮ ಏಕೋತ್ತರ ಶತಸ್ಥಲದಲ್ಲಿ ತಮ್ಮ ಗುರುಕುಲದ ಅನ್ವಯವನ್ನು ಹೇಳಿರುವರು. ಅಲ್ಲಿ ಇಪ್ಪತ್ತೊಂದು ಮಂದಿ ಗುರುಗಳ ವಿವರ ಸಿಗುತ್ತದೆ. ಈ ಗುರು ಪರಂಪರೆಯಲ್ಲಿ ನಾಲ್ಕನೆಯ ಹಾಗೂ ಐದನೆಯವರು ಉರಿಲಿಂಗದೇವ ಹಾಗೂ ಉರಿಲಿಂಗಪೆದ್ದಿಗಳು. ಉರಿಲಿಂಗಪೆದ್ದಿ ಕಳ್ಳತನ ಮಾಡಿಕೊಂಡು ಜೀವನ ಸಾಗಿಸುತ್ತಿದ್ದ ಅಸ್ಪೃಶ್ಯ ಕುಲದ ಗೃಹಸ್ಥ. ನಿರಕ್ಷರಿಯೂ ಮಂದಮತಿಯೂ ಆಗಿದ್ದ. ಇವನ ಬದುಕಿನಲ್ಲಿ ಮಹತ್ತರ ಬದಲಾವಣೆಯಾದುದು ಉರಿಲಿಂಗದೇವರ ಕೃಪಾಶೀರ್ವಾದ ಪಡೆದ ಮೇಲೆ, ಈ ಕಥೆ ಪ್ರಚಲಿತವಿರುವಂತೆ ಬಹಳ ಕುತೂಹಲಕಾರಿಯಾಗಿದೆ.

### ಘೋ ದಗಡಿ ಜಾ.

ನಂದವಾಡ ಗ್ರಾಮದ ಸೂರಯ್ಯನೆಂಬ ಸದ್ಭಕ್ತನು ಆಚಾರ್ಯ ಉರಿಲಿಂಗದೇವರ ಉಪದೇಶ ಪಡೆಯಬೇಕೆಂಬ ಆಸೆಯಿಂದ ದೀಕ್ಷಾಮಂಟಪವನ್ನು ರಚಿಸಿ, ಗುರುಗಳನ್ನು ತನ್ನ ಮನೆಗೆ ಆಹ್ವಾನಿಸಿದನು. ಭಕ್ತನ ಕೋರಿಕೆಯಂತೆ ಗುರುಗಳು ಬಂದರು.

ಈ ದೀಕ್ಷಾಸಮಾರಂಭಕ್ಕೆ ಭವಿಗಳು ಬರಬಾರದೆಂದು ಸೂರಯ್ಯ ತನ್ನ ಮನೆಯ ಬಾಗಿಲು ಮುಚ್ಚಿಸಿದನು. ಆ ದಿನ ಹಗಲಿನಲ್ಲಿಯೇ ಸೂರಯ್ಯನ ಮನೆಯಲ್ಲಿ ಕಳ್ಳತನ ಮಾಡಬೇಕೆಂದು ಬಂದ ಪೆದ್ದಣ್ಣ ಮನೆಯ ಬಾಗಿಲು ಮುಚ್ಚಿರುವುದನ್ನು ಕಂಡು ಮಾಳಿಗೆಯ ಮೇಲೇರಿ ಕಿಟಕಿಯಿಂದ ಮೆಲ್ಲನೆ ಒಳಗಿನ ದೃಶ್ಯ ನೋಡಿದ. ಸಡಗರ ಸಂಭ್ರಮಗಳಿಂದ ನಡೆಯುತ್ತಿದ್ದ ಸಾಂಪ್ರದಾಯಿಕವಾದ ಲಿಂಗದೀಕ್ಷಾ ಕ್ರಮವನ್ನು ನೋಡನೋಡುತ್ತ ಪೆದ್ದಣ್ಣ ತಾನುಬಂದ ಕೆಲಸವನ್ನೇ ಮರೆತ. ಅವನ ಮನಸ್ಸಿನ ಮೇಲೆ ಆ ದೃಶ್ಯ ಅದ್ಭುತವಾದ ಪರಿಣಾಮ ಬೀರಿತು. ಮಾಳಿಗೆಯಿಂದ ಇಳಿದುಬಂದ ಪೆದ್ದಣ್ಣನಲ್ಲಿ ತಾನೂ ಲಿಂಗವಂತನಾಗಬೇಕೆಂಬ ಆಸೆಯಾಯಿತು. ಅಂದಿನಿಂದ ಕಳ್ಳ ತನ ಮಾಡುವುದನ್ನು ಬಿಟ್ಟ. ಗುರುಕೃಪೆಯನ್ನು ಹೇಗಾದರೂ ಪಡೆಯಬೇಕೆಂಬ ಹಂಬಲ ಅವನಲ್ಲಿ ದಿನದಿನಕ್ಕೆ ಬೆಳೆಯಿತು. ನಿತ್ಯವೂ ಉರಿಲಿಂಗ ದೇವರಿಗೆ ಕಾಣ ಪಂತೆ ಮಠಕ್ಕೆ ಕಟ್ಟಿಗೆಯ ಹೊರೆಯೊಂದನ್ನು ಹಾಕಿ ಬರತೊಡಗಿದ.

ಒಮ್ಮೆ ಉರಿಲಿಂಗದೇವರು ಪೆದ್ದಣ್ಣನನ್ನು ಕರೆದು ನೀ ತರುವ ಕಟ್ಟಿಗೆಗೆ ಬೆಲೆ ತೆಗೆದುಕೊಳ್ಳುವದಾದರೆ ಮಾತ್ರ ಅದನ್ನು ಒಳಗೆ ತರುವದು. ಇಲ್ಲದಿದ್ದರೆ ತರಬೇಡ ಎಂದು ಗದರಿಸಿದರು. ನಂದವಾಡದ ಸೂರಭಕ್ತನಿಗೆ ಲಿಂಗವನ್ನು ಕೊಟ್ಟಂತೆ ನನಗೂ ಕೊಟ್ಟು ಕಾಪಾಡಿ, ಬೆಲೆಯ ನಾನೊಲ್ಲೆ ಎಂದ ಪೆದ್ದಣ್ಣ. ದೀಕ್ಷೆ ಹೇಗೆ ? ಎಂದು ಗುರುಗಳು ಕೇಳಲು ತಾನು ಸೂರಭಕ್ತನ ಮನೆಯ ಮಾಳಿಗೆಯ ಕಿಟಕಿಯಿಂದ ನೋಡಿ ದುದನ್ನೆಲ್ಲಾ ಪೆದ್ದಣ್ಣ ಹೇಳಿದನು. ವ್ಯಕ್ತಿಯ ಪೂರ್ವ ವಿವರಗಳನ್ನು ತಿಳಿಯದೆ, ಅರ್ಹನೆ ಅಲ್ಲವೆ ಎಂಬುದನ್ನು ವಿಚಾರ ಮಾಡದೆ ದೀಕ್ಷೆ ಕೊಡುವುದು ಹೇಗೆ ? ಎಂದು ವಿಚಾರ ಮಾಡುತ್ತ ಗುರುಗಳು ಮೌನವಾದರು. ನಿತ್ಯವೂ ಪೆದ್ದಣ್ಣ ತಪ್ಪದೆ ಕಟ್ಟಿ ಗೆಯ ಹೊರೆ ತಂದು ಹಾಕಿ, ಗುರುದರ್ಶನವಾದಾಗಲೆಲ್ಲಾ ಲಿಂಗವನ್ನು ಅನುಗ್ರಹಿಸು ವಂತೆ ಕಾಡತೊಡಗಿದ. ಈ ಕರೆಕರೆಯನ್ನು ನಿವಾರಿಸಿಕೊಳ್ಳದ ಹೊರತು ಈತ ತಮ್ಮನ್ನು ಬಿಡುವುದಿಲ್ಲವೆಂದು ಯೋಚಿಸಿ ಒಂದು ದಿನ ಕಲ್ಲೊಂದನ್ನು ಕೈಯಲ್ಲಿ ಹಿಡಿದು "ಘೇ ದಗಡಿ ಜಾ" ಎಂದು ಅದನ್ನು ಬೈದು ಕೊಡಲು, ಎರಡು ಕೈಗಳಿಂದ ಸ್ವೀಕರಿಸಿ ಮನೆಗೆ ಬಂದು ಶುದ್ಧ ಮನಸ್ಸಿನಿಂದ ಪೂಜಿಸತೊಡಗಿದನು. 'ಘೆ ದಗಡಿ ಜಾ' ಎಂಬುದು ನಿತ್ಯ ಮಂತ್ರವಾಯಿತು. ಇವನ ನಿಶ್ಚಲ ಭಕ್ತಿಗೆ ಕಲ್ಲು ಜೋತಿರ್ಲಿಂಗ ವಾಯಿತು. ಭಾವಶುದ್ಧಿಯಿಂದ ಲಿಂಗವನ್ನು ಭಜಿಸಿ ಗುರುಪಾದಸೇವೆಯನ್ನು ನಿತ್ಯವೂ ತಪ್ಪದೇ ಮಾಡುತ್ತಿದ್ದನು. ಹೀಗಿರುವಲ್ಲಿ ಮಳೆಯಾಗದೆ ಜನ ಕಂಗಾಲಾ ಗಿದ್ದರು. ಆ ಪಟ್ಟಣದ ಮಹಾರಾಜನಾದ ನಂದರಾಜನು ಕೆರೆಯನ್ನು ಪ್ರಜೆಗಳ ಕಷ್ಟ ಪರಿಹಾರಕ್ಕಾಗಿ ಅಗೆಸತೊಡಗಿದ. ಎಷ್ಟು ಅಗೆಸಿದರೂ ಜಲ ಕಾಣಿಸಲಿಲ್ಲ. ಶಿಲ್ಪಿಗರನ್ನು ಕರೆಯಿಸಿ ಕೇಳಲು, ಕೆರೆಯ ಮಧ್ಯದಲ್ಲಿ ವಿಶಾಲವಾದ ಬಂಡೆಯೊಂದಿದೆ ಅದನ್ನು ತೆಗೆದರೆ ನೀರು ಬರುತ್ತದೆಂದು ಅವರು ಹೇಳಿದರು. ಘನಮಹಿಮರಿಂದಲ್ಲದೆ



ಸಾಮಾನ್ಯರಿಂದ ಈ ಕಾರ್ಯವಾಗದೆಂದು ಬಗೆದ ರಾಜ ಉರಿಲಿಂಗ ದೇವರನ್ನು ಕರೆಯಿಸಿದ. ಅವರು ಪೆದ್ದಣ್ಣನೊಂದಿಗೆ ಅರಸನಲ್ಲಿಗೆ ಬಂದರು. ಅರಸ ತನ್ನ ಕಷ್ಟ ವನ್ನು ಗುರುಗಳಲ್ಲಿ ಹೇಳಿಕೊಂಡ. ಉರಿಲಿಂಗದೇವರು ಶಿಷ್ಯನ ಮುಖ ನೋಡಿದರು. ಗುರುವಾಜ್ಞೆಯೆಂದು ಭಾವಿಸಿ ಗುರುಪಾದವನ್ನು ಹೃದಯದಲ್ಲಿ ನೆಲೆಗೊಳಿಸಿ ಇಷ್ಟ ಲಿಂಗವನ್ನು ತೆಗೆದು "ಘೇ ದಗಡಿ ಜಾ" ಎಂದನು. ಸ್ವಯಂಜ್ಯೋತಿಯಾದ ಇಷ್ಟ ಲಿಂಗವು ಹೋಗಿ ಬಂಡೆಯಲ್ಲಿ ಕೀಲಿಸಿತು. ಪೆದ್ದಣ್ಣ ಮತ್ತೊಮ್ಮೆ ಮಂತ್ರೋಚ್ಚಾರ ಮಾಡಲು ಲಿಂಗವು ಭರದಿಂದ ಹೊರಬಂದು ಪೆದ್ದಣ್ಣನಲ್ಲಿ ಸೇರಿತು. ಕ್ಷಣಮಾತ್ರ ದಲ್ಲಿಯೇ ಭೂಮಿಯಿಂದ ನೀರು ಉಕ್ಕಿ ಹರಿದು ಕೆರೆಯನ್ನೆಲ್ಲಾ ತುಂಬಿತು. ಶಿಷ್ಯನ ಮಹಿಮೆಯನ್ನರಿತ ಗುರುಗಳು ಅವನಿಗೆ ಉಪದೇಶವಿತ್ತು, ತಮ್ಮ ಪೀಠವನ್ನೇರಲು ಇವನೇ ಯೋಗ್ಯನೆಂದು ಭಾವಿಸಿ ಉರಿಲಿಂಗಪೆದ್ದಿ ಎಂಬ ಹೆಸರನ್ನು ಅನುಗ್ರಹಿಸಿ ಪಟ್ಟಾಧಿಕಾರಿಯನ್ನಾಗಿಯೂ ಮಾಡಿದರು.

### ಕಲ್ಲನ್ನೇ ಲಿಂಗವೆಂದು ಸದ್ಭಾವದಿಂದ ಪೂಜಿಸಿದರೆ, ಜ್ಯೋತಿರ್ಲಿಂಗವಾಗುತ್ತದೆ.

ಈ ಗುರು–ಶಿಷ್ಯರ ಉಲ್ಲೇಖ ನಮಗೆ ಮೊದಲಿಗೆ ಮಲ್ಲಿಕಾರ್ಜುನ ಪಂಡಿತಾ ರಾಧ್ಯ ಹಾಗೂ ಪಾಲ್ಕುರಿಕೆ ಸೋಮನಾಥರಲ್ಲಿ ಸಿಗುವುದಾದರೂ, ಇವರ ಬದುಕಿಗೆ ಸಂಬಂಧಿಸಿದ ಮೇಲಿನ ಕಥೆ ನಮಗೆ ಮೊದಲು ದೊರೆಯುವುದು ಅದೃಶ್ಯಕವಿಯ (ಸಂ. ೧೫೩೫) ಪ್ರೌಢರಾಯನ ಕಾವ್ಯದಲ್ಲಿ ಏಕೋ ಏನೋ, ಈ ಗುರು–ಶಿಷ್ಯರು ಅಜ್ಞಾತರಾಗಿಯೇ ಉಳಿದುಬಿಟ್ಟಿರುವರು. ಹರಿಹರ, ಭೀಮಕವಿ, ಲಕ್ಕಣ್ಣ ದಂಡೇಶ, ಗುಬ್ಬಿಯ ಮಲ್ಲಣ, ವಿರೂಪಾಕ್ಷ ಪಂಡಿತ, ಪರ್ವತದೇವ, ಮಾದಣ್ಣ, ಉತ್ತರ ದೇಶದ ಬಸವಲಿಂಗ–ಇವರ ಕೃತಿಗಳಲ್ಲಿ ಎಲ್ಲಿಯೂ ಮೇಲಣ ಕಥೆ ಉಲ್ಲೇಖಗೊಳ್ಳದಿರುವುದು ಆಶ್ಚರ್ಯ. ಕಲ್ಲನ್ನೇ ಲಿಂಗವೆಂದು ಸದ್ಭಾವದಿಂದ ಪೂಜಿಸಿ ಜ್ಯೋತಿರ್ಲಿಂಗವಾಗಿಸಿದ ಉರಿಲಿಂಗಪೆದ್ದಿಯ ಕಥೆ ನಮ್ಮ ವೀರಶೈವ ಕವಿಗಳ ಕೃತಿಗಳಲ್ಲಿ ಉಪಕಥೆಯಾಗಿ ಯಾದರೂ ಬರಬೇಕಿತ್ತು. ಶರಣಸತಿ ಲಿಂಗಪತಿಯೆಂಬ ಮಧುರಭಾವದ ಮಹತ್ವದ ವಚನಗಳನ್ನು ಬರೆದ ಉರಿಲಿಂಗದೇವನಾಗಲೀ ; ವೇದ, ಆಗಮ, ಉಪನಿಷತ್ತು, ಪುರಾಣಾಧಿಗಳನ್ನು ಆಳವಾಗಿ ವ್ಯಾಸಂಗಮಾಡಿ ಅವನ್ನು ವೈಚಾರಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸಿ ತತ್ತ್ವನಿಷ್ಠವಾದ, ಅನುಭವಯುಕ್ತವಾದ ವಚನಗಳನ್ನು ಬರೆದ. ಉರಿ ಲಿಂಗಪೆದ್ದಿಯಾಗಲೀ ವಚನಸಾಹಿತ್ಯದಲ್ಲಿ ಗಮನಾರ್ಹವಾದ ಸ್ಥಾನಮಾನಗಳನ್ನು ಪಡೆದಂತೆ ಕಂಡುಬರುವುದಿಲ್ಲ.

ಉರಿಲಿಂಗದೇವರು ಉತ್ತರ ಕರ್ನಾಟಕದ ಪ್ರಸಿದ್ಧ ಮಠದ ಪೀಠಾಧಿಕಾರಿಯಾಗಿ, ತಮ್ಮ ಉತ್ತರಾಧಿಕಾರಿಯನ್ನು ಆಯ್ಕೆ ಮಾಡುವಾಗ ಸಂಪ್ರದಾಯವನ್ನು ಮೀರಿ

ಅಸ್ಪೃಶ್ಯನೂ ಗೃಹಸ್ಥನೂ ಆದ ಉರಿಲಿಂಗಪೆದ್ದಿಯನ್ನು ಆಯ್ಕೆ ಮಾಡಿದುದು ನಮ್ಮ ಊಹೆಗೂ ಮೀರಿದ ಸಂಗತಿಯಾಗಿದೆ. ಒಂದು ಮಠದ ಪೀಠಾಧಿಕಾರಿಯನ್ನು ಆಯ್ಕೆ ಮಾಡುವಾಗ ಸತ್ಕುಲ ಪ್ರಸೂತನೂ ಬ್ರಹ್ಮಚಾರಿಯೂ ಆದವನನ್ನು ನೇಮಕ ಮಾಡುವುದು ನಡೆದು ಬಂದ ಸಂಪ್ರದಾಯ. ಪರಧನ, ಪರಸ್ತ್ರೀ, ಪರದೈವವ ಬಿಟ್ಟು ಪಂಚೇಂದ್ರಿಯ ಷಡ್ವರ್ಗಂಗಳ ಬಿಟ್ಟು ನಿರುಪಾಧಿಕರಾಗಿ ಪೂಜಿಸುವವರೇ ಸದ್ಭಕ್ತರು ಎಂದು ನಂಬಿದ, ಶಿವಭಕ್ತನೇ ಕುಲಜನು. ಶಿವಭಕ್ತನೇ ಉತ್ತಮನು. ಎಂದು ಭಾವಿಸಿದ ಉರಿಲಿಂಗದೇವ ಸಂಪ್ರದಾಯವನ್ನು ಕಡೆಗಣಿಸಿ ತನಗೆ ಯೋಗ್ಯನೆಂದು ಕಂಡುಬಂದ ಶ್ವಪಚನನ್ನು ಗೃಹಸ್ಥನನ್ನು ತನ್ನ ಪೀಠಾಧಿಕಾರಿಯಾಗಿ ನೇಮಿಸಿದುದು ಕ್ರಾಂತಿಕಾರಕ ಸಂಗತಿ. ಮಾನವನಿರ್ಮಿತ ಜಾತಿ ಹಾಗೂ ಹುಟ್ಟಿನಿಂದಲೇ ವ್ಯಕ್ತಿಯ ಯೋಗ್ಯತೆಯನ್ನು ನಿರ್ಣಯಿಸುವ ವರ್ಣಪದ್ಧತಿಗಳನ್ನು ಬಸವಾದಿ ಪ್ರಮಥರು ಬಲವಾಗಿ ಖಂಡಿಸಿದರು. ಅವರ ಸಿದ್ಧಾಂತವನ್ನು ಕಾರ್ಯರೂಪಕ್ಕೆ ತಂದ ಮಹಾ ಮಾನವತಾವಾದಿಯಾಗಿ ಉರಿಲಿಂಗದೇವ ಕಂಡುಬರುವನು ಒಳ್ಳೆಯ ಪರಿಸರ ಹಾಗೂ ಮಾರ್ಗದರ್ಶನಗಳ ಜೊತೆಗೆ ಶ್ರದ್ಧೆ-ನಿಷ್ಠೆಗಳು ಈಡುಜೋಡಾದರೆ ಅಸಾಧ್ಯವೂ ಸಾಧ್ಯವಾಗಬಲ್ಲುದೆಂಬುದಕ್ಕೆ ಉರಿಲಿಂಗಪೆದ್ದಿಯ ಕಥೆ ಜ್ವಲಂತ ನಿದರ್ಶನವಾಗಿದೆ.

## ಜ್ಞಾನಕ್ಕೆ ಉಚ್ಚನೀಚರೆಂಬ ಭೇದ-ಭಾವವಿಲ್ಲ.

ಉರಿಲಿಂಗಪೆದ್ದಿ ವೇದ ಆಗಮ ಉಪನಿಷತ್ತುಗಳನ್ನು ಪುರಾಣ ಸ್ಮೃತಿ, ಶಿವಾದ್ವೈತಸಿದ್ಧಾಂತಗಳನ್ನು ಆಳವಾಗಿ ಅಭ್ಯಾಸ ಮಾಡಿದ್ದ ಮಹಾನ್ ವಿದ್ವಾಂಸ, ಚೆನ್ನಬಸವಣ್ಣನ ವಚನಗಳನ್ನು ನೆನಪಿಸುತ್ತದೆ ಇವನ ವಚನಶೈಲಿ. ಚೆನ್ನಬಸವಣ್ಣನಂತೆ ತತ್ತ್ವದ ಪ್ರತಿಪಾದನೆಗಾಗಿ ಇವನೂ ವೇದ, ಆಗಮ, ಉಪನಿಷತ್ತುಗಳನ್ನು ಆಧಾರವಾಗಿ ಕೊಟ್ಟಿರುವನು, (ಇವನಲ್ಲಿ ಚೆನ್ನಬಸವಣ್ಣನಿಗಿಂತಲೂ ಹೆಚ್ಚಾಗಿ ಸಂಸ್ಕೃತ ಶ್ಲೋಕಗಳು ಉಲ್ಲೇಖಗೊಂಡಿವೆ. ಅವರಲ್ಲೂ ೨೧೪, ೨೧೫ನೇ ವಚನಗಳು ಸಂಸ್ಕೃತ ಶ್ಲೋಕಭೂಯಿಷ್ಠವಾಗಿವೆ.) ಚೆನ್ನಬಸವಣ್ಣನಲ್ಲಿ ಬರುವಂತೆ ಇವನಲ್ಲೂ ಉದ್ಬುದ್ಧ ವಚನಗಳು ಕಾಣಬರುತ್ತವೆ. ಚೆನ್ನಬಸವಣ್ಣ ತನ್ನ ವಚನಗಳಲ್ಲಿ ವೀರಶೈವ ಧರ್ಮದ ತಾತ್ತ್ವಿಕಾಂಶವನ್ನು ಪ್ರಧಾನವಾಗಿ ವಿವರಿಸಿದಂತೆ ಇವನೂ. ಹೇಳಿರುವನು. ಚೆನ್ನಬಸವಣ್ಣ ತನ್ನ ಕಾಲದ ಸಾಮಾಜಿಕ-ಧಾರ್ಮಿಕ ಜೀವನದವಿ ವರಗಳನ್ನು ಯಥೇಚ್ಛವಾಗಿ ಕೊಟ್ಟಂತೆ ಇವನೂ ನೀಡಿರುವನು. ಇವು ಮೇಲುನೋಟಕ್ಕೆ ಇವರಿಬ್ಬರಲ್ಲೂ ಕಾಣುಬರುವ ಸಾಮಾನ್ಯಾಂಶಗಳು. ಉರಿಲಿಂಗಪೆದ್ದಿಯ ಬದುಕು ಒಂದು ಪವಾಡ ಸದೃಶವಾದುದು. ಕೆಳವರ್ಗಕ್ಕೆ ಸೇರಿದ ಸಾಮಾನ್ಯನೂ ಅಲ್ಪಮತಿಯೂ ಆಗಿದ್ದ ಇವನ ಬದುಕು ಲಿಂಗದೀಕ್ಷೆಯಿಂದಾಗಿ, ಗುರುಕಾರುಣ್ಯದಿಂದಾಗಿ ಬಹುದೊಡ್ಡ ತಿರುವನ್ನು ಪಡೆದುಕೊಂಡಿತು. "ಸದ್ಗುರುವಿನಿಂದಾದ ಶಿಷ್ಯನು ಸದ್ಗುರುವಪ್ಪನು ತಪ್ಪದು



ದಿಟದಿಟನೋಡಾ !! ಯಥಾಬೀಜಂ ತಥಾಂಕುರಂ ಎಂಬ ವಾಕ್ಯ ತಪ್ಪದು" (ವ. ೨೪) ಎಂಬ ಇವನ ಮಾತು ಸ್ವತಃ ಇವನ ಬದುಕಿಗೆ ಬರೆದ ಬಹುದೊಡ್ಡ ಭಾಷ್ಯದಂತಿದೆ. ಜ್ಞಾನಕ್ಕೆ ಉಚ್ಚ-ನೀಚರೆಂಬ ಭೇದಭಾವವಿಲ್ಲ, ವಯಸ್ಸಿನ ಕಟ್ಟುಪಾಡುಗಳಿಲ್ಲ. ಸಂಸಾರ ಬಂಧನವಿಲ್ಲ, ಜ್ಞಾನಪಿಪಾಸುವಿಗೆ ಬೇಕಾದುದು ಮುಖ್ಯವಾಗಿ ಶ್ರದ್ಧೆ. ಶ್ರದ್ಧಾವಂತನಿಗೆ ಜ್ಞಾನ ಲಭಿಸುತ್ತದೆ ಎಂಬ ಮಾತಿಗೆ ಜೀವಂತ ಉದಾಹರಣೆ ಉರಿಲಿಂಗಪೆದ್ದಿ ಲಿಂಗವಂತನಾದಮೇಲೆ ದಿವಾರಾತ್ರಿ ಊಟ-ನಿದ್ದೆಗಳ ಪರಿವೆಯಿಲ್ಲದೆ ಜ್ಞಾನ ದಾಹಿಯಾಗಿ ತನ್ನ ಹಸಿವನ್ನು ಹಿಂಗಿಸಿಕೊಂಡನು. ಜ್ಞಾನ ಇವನಿಗೆ ಅನಾಯಾಸವಾಗಿ ದಕ್ಕಿದ್ದಲ್ಲ, ಶ್ರಮಪೂರ್ವಕವಾಗಿ ಪಡೆದುಕೊಂಡದ್ದು.

## ಲಿಂಗದಲ್ಲಿ ಬಸವಣ್ಣನನ್ನು ಬಸವಣ್ಣನಲ್ಲಿ ಲಿಂಗವ ಕಂಡಾತ ಉರಿಲಿಂಗಪೆದ್ದಿ.

ಉರಿಲಿಂಗಪೆದ್ದಿಯ ಮೇಲೆ ಸಂಸ್ಕೃತ ವಾಙ್ಮಯ ಬೀರಿರುವ ಪ್ರಭಾವ ಬಹು ದೊಡ್ಡದು. ತೀಕ್ಷ್ಣಮತಿಯಾದ ಉರಿಲಿಂಗಪೆದ್ದಿ ಅಲ್ಲಿನ ಸಾರಭೂತ ವಿಚಾರಗಳನ್ನು ತನ್ನ ಅನಿಸಿಕೆಗಳನ್ನು ಸಮರ್ಥಿಸಲು ಆಧಾರವಾಗಿ ಬಳಸಿಕೊಂಡು, ತನ್ನ ವಿಚಾರ ಪ್ರಣಾಲಿಕೆಯನ್ನು ತರ್ಕಬದ್ಧಗೊಳಿಸುವನು, ಸೂತ್ರಪ್ರಾಯವಾಗಿಸುವನು, ಪ್ರಮಾಣೀಕರಿಸುವನು ಈ ಉದಾಹೃತ ಶ್ಲೋಕಗಳಿಂದಾಗಿ ಇವನ ವಿಚಾರಕ್ಕೊಂದು ಗಾಂಭೀರ್ಯ ಪ್ರಾಪ್ತವಾಗಿದೆ. ಇವನ ಬೌದ್ಧಿಕ ಪರಿಶ್ರಮದ ಬಗೆಗೆ ಗೌರವಾದರ ಭಾವನೆಗಳು ಸಹಜವಾಗಿ ಮನದಾಳದಲ್ಲಿ ಮೂಡುತ್ತವೆ. ತನ್ನ ಅನಿಸಿಕೆಗಳ, ತಾತ್ತ್ವಿಕವಾದ ವಿಷಯಗಳ ಪ್ರತಿಪಾದನೆಗೆ ಶ್ಲೋಕಗಳನ್ನು ಪ್ರಮಾಣವಾಗಿ ಸ್ವೀಕರಿಸಿದಂತೆಯೇ ಕೆಲವು ದರ್ಶನಗಳಲ್ಲಿನ ಕೊರತೆಗಳನ್ನು ಎತ್ತಿಹೇಳಿ ಪ್ರತಿಪಾದಿಸುವ ವಿಷಯವನ್ನು ಅತ್ಯಂತ ಸಮರ್ಥರೀತಿಯಲ್ಲಿ ಹಲವು ದೃಷ್ಟಾಂತಗಳ ಮೂಲಕ ವಿವರಿಸುವ ಇವನ ಕೌಶಲ ಅಪೂರ್ವವಾದುದು- (ಉದಾಹರಣೆಗೆ ನೋಡಿ ವ. ೨೦೭, ೨೧೬, ೨೪೦ ಇತ್ಯಾದಿ) ಉರಿಲಿಂಗಪೆದ್ದಿಯ ಜ್ಞಾನ ಬರಿಯ ಪುಸ್ತಕದ್ದಲ್ಲ. ತಾರ್ಕಿಕ ಮನೋಭಾವದ ಉರಿಲಿಂಗಪೆದ್ದಿ ತಾನು ಓದಿದ್ದನ್ನು ಪೃಥಕ್ಕರಿಸಿ ತನ್ನ ನಂಬುಗೆಗೆ, ತನ್ನ ಬದುಕಿನ ಸರ್ವಾಂಗೀಣ ವಿಕಸನಕ್ಕೆ ಎಷ್ಟು ಬೇಕೋ ಅಷ್ಟನ್ನು ಸ್ವೀಕರಿಸಿರುವನು. "ಪುರಾತನರ ಶ್ರೀಪಾದಂಗಗಳಲ್ಲಿ ಎನ್ನ ಶಿರಸ್ಪರ್ಶನದಿಂದ ಸಾಷ್ಟಾಂಗವೆರಗಲು ಸಾಯುಜ್ಯಪದವಯ್ಯ" ಎನ್ನುವ (ವ. ೨೩೭) ಉರಿಲಿಂಗಪೆದ್ದಿ ಕಣ್ಣಪ್ಪ, ಮಾದ ಚೆನ್ನಯ್ಯ, ಚೋಳಿಯಕ್ಕ (ವ. ೩೧) ಸಿರಿಯಾಳ, ಸಿಂಧುಬಲ್ಲಾಳ, ನಂಬಿಯಣ್ಣ, ನಂಬಿವ್ವೆ, ಕೆಂಭಾವಿ ಭೋಗಣ್ಣ, ಬಸವಣ್ಣ ಮೊದಲಾದ ಪುರಾತನ ನೂತನರ ಬದುಕಿನಿಂದ ವಿಶೇಷವಾಗಿ ಪ್ರೇರಣೆಪಡೆದಿದ್ದು ಎಷ್ಟೋ ಕಡೆ ತನ್ನ ಅಭಿಪ್ರಾಯವನ್ನು ಪುರಾತನ ನೂತನರ ಬದುಕಿನ ಘಟನೆಗಳಿಂದ ಸಮರ್ಥಿಸಿರುವನು. ಬಸವಣ್ಣನಂತೂ

# ಶ್ರೀ ಸಿದ್ಧಗಂಗಾ ಶ್ರೀ ಗುರು

—ಹರತಿವೀರೇಶ

"ತನುವ ಗುದ್ದಲಿಮಾಡಿ ಮನವ ತೋಂಟವಗೈದು"
ನೀನೊಂದು ಹೂದೋಟವನು ಬೆಳೆದುದನು ಕಂಡೆ,
ಮರುಗ ಮಲ್ಲಿಗೆ ಜಾಜಿ ನಾಗಸಂಪಿಗೆ ಬಕುಳ
ಬಿಲ್ವ ಮಂಚಿಪತ್ರೆ ಕಂಚಿವಾಳ ಕಣಗಿಲೆ ತುಂಬೆ
ಬಸವನ ಪಾದ ಶಿವಲಿಂಗ ಶ್ರೀ ಪುಷ್ಪ
ಅರಳಿ ನಗುನಗುತ ಒಡೆಯನ ಸೇವೆಗೊದಗಿಬಂದುದ
ಕಂಡೆ ಶ್ರೀ ಸಿದ್ಧಗಂಗಾ ಶ್ರೀ ಗುರು.

★ ★ ★

ಮಗುವಿನ ಮುಗ್ಧ ಮಂದಹಾಸ, ಮುಂಜಾವಿನ ಮಲ್ಲಿಗೆಯ ಸುಹಾಸ
ಸಂಜೆನೇಸರ ಚಂದ್ರಗಾವಿಯ ಬಣ್ಣ, ತುಂಬು ಹುಣ್ಣಿಮೆ ಶಾಂತಿ
ಶರಾವತಿಯ ಪ್ರವಾಹ ಗತಿ, ಬೆಳೆದ ಹೊಲದ ತೆನೆಭಾರ,
ನೆನಪಿನ ರತ್ನ ಭಂಡಾರ ನಿಮ್ಮ ಉಪನ್ಯಾಸ
ಶ್ರೀ ಸಿದ್ಧಗಂಗಾ ಶ್ರೀ ಗುರು.

---

ಉರಿಲಿಂಗಪೆದ್ದಿಗೆ ಆದರ್ಶಮೂರ್ತಿಯಾಗಿರುವನು. ಶ್ರೀಗುರುಲಿಂಗದಲ್ಲಿ ಬಸವಣ್ಣ ನನ್ನೂ ಬಸವಣ್ಣನಲ್ಲಿ ಶ್ರೀಗುರುಲಿಂಗವನ್ನು ಕಂಡೆನೆಂದು ಹೇಳಿಕೊಳ್ಳುವಲ್ಲಿ ಅವನ ಅನನ್ಯಭಕ್ತಿ ಶೃಂಗಪ್ರಾಯವಾಗಿದೆ. (ವ. ೨೩೮) ಸದ್ಭಕ್ತಿ ಬಸವಣ್ಣನಿಗಲ್ಲದೆ, ಸರ್ವ ಬ್ರಹ್ಮಾಂಡದೊಳಗಣ ಸರ್ವಲೋಕದ ದೇವ-ದಾನವ-ಮಾನವರಾರಿಗೂ ಅಳವಡದು, ಆರಿಗೂ ಆಗದು ಎಂದು ಹೇಳುವ ಉರಿಲಿಂಗಪೆದ್ದಿ ಎಂಬ ಕೃತಾರ್ಥಭಾವದಲ್ಲಿ ತನ್ಮಯ ನಾಗಿಬಿಡುವನು. ಬಸವಣ್ಣನ ಎಷ್ಟೋ ವಚನಗಳ ಭಾವಗಳು ಉರಿಲಿಂಗಪೆದ್ದಿಯಲ್ಲಿ ಸೇರಿಹೋಗಿವೆ. ಬಸವಣ್ಣನ ದಟ್ಟವಾದ ಪ್ರಭಾವ ವಲಯಕ್ಕೆ ಸಿಕ್ಕಿಬಿದ್ದಾಗ ಇವೆಲ್ಲಾ ಆಗುವಂತಹದೇ !

(ಶರಣ ಧರ್ಮ ಕೃಪೆ)



# ಶಿಕ್ಷಣತಜ್ಞ ಕೈಲಾಸಂ

( ಆಕಾಶವಾಣಿ ಕೃಪೆಯಿಂದ )

—ಎಸ್. ಕೃಷ್ಣಭಟ್ಟ

ನಮ್ಮ ದೇಶದ ಪ್ರತಿಭಾವಂತರಲ್ಲಿ ಒಬ್ಬರಾದ ದಿವಂಗತ ಟಿ. ಪಿ. ಕೈಲಾಸಂ ಅವರಿಂದ ಹೊರಹೊಮ್ಮುತ್ತಿದ್ದ ವಿಚಾರಾತ್ಮಕವಾದ ಚಮತ್ಕಾರೋಕ್ತಿಗಳೂ ಹಾಸ್ಯ ನುಡಿಗಳೂ ಬರ್ನಾರ್ಡ್ ಷಾ ಅವರನ್ನು ನೆನಪಿಗೆ ತರತಕ್ಕಂಥವು. ಶ್ರೀರಂಗರಂತೆ ಕನ್ನಡ ನಾಟಕರಂಗದಲ್ಲಿ ಕ್ರಾಂತಿಯನ್ನುಂಟುಮಾಡಿದ ಕೈಲಾಸಂ ಹಲವು ಕನ್ನಡ ನಾಟಕಗಳನ್ನೂ, ಇಂಗ್ಲೀಷ್ ನಾಟಕಗಳನ್ನೂ ರಚಿಸಿದ್ದಾರೆ ; ಜೊತೆಗೆ ಕತೆ-ಕವನ ಗಳಲ್ಲೂ ತಮ್ಮ ಮೇಧಾಶಕ್ತಿಯನ್ನು ಪ್ರದರ್ಶಿಸಿದ್ದಾರೆ. ಅವರ ಆಂಗ್ಲ ಶಿಕ್ಷಣ ಹಾಗೂ ಇಂಗ್ಲೆಂಡಿನಲ್ಲಿ ದೀರ್ಘಕಾಲದ ವಾಸ ಅವರ ಕೃತಿಗಳ ಮೇಲೆ ಪ್ರಭಾವ ಬೀರಿದ್ದರೂ, ನಮ್ಮ ದೇಶದ ಪ್ರಾಚೀನ ಸಂಸ್ಕೃತಿಯ ಮೌಲ್ಯಗಳಲ್ಲಿ ಅವರ ನಂಬಿಕೆ ಅಪಾರ. ರಾಷ್ಟ್ರಕವಿ ಕಾಳಿದಾಸನ ಮಾತಿನಂತೆ ಗುಣವೆಲ್ಲಿದ್ದರೂ ಅದಕ್ಕೆ ಅವರಿಂದ ಸ್ವಾಗತ ವುಂಟು. ಅಲ್ಲದೆ, ಅವರ ಕೃತಿಗಳಲ್ಲಿ ಅಲ್ಲಲ್ಲಿ ಪ್ರಾಸಂಗಿಕವಾಗಿ ಬರುವ ಕೆಲವು ಮಾತುಗಳು ಹಾಗೂ ಪಾತ್ರಚಿತ್ರಣ ನಿಜವಾದ ಶಿಕ್ಷಣಕ್ಕೆ ವ್ಯಾಖ್ಯೆ ನೀಡುವುವು.

**ಆದರ್ಶ ಯುವಕ** :—ಕೈಲಾಸಂ ಅವರು ಶಿಕ್ಷಣದ ನೈಜತೆಯನ್ನು 'ದಿ ಬರ್ಡನ್ (The Burden)', 'ದಿ ಪರ್‌ಪಸ್ (The Purpose)' ಮತ್ತು 'ಕೀಚಕ (Keechaka) ಎಂಬ ಆಂಗ್ಲನಾಟಕಗಳಲ್ಲಿ ತೋರಿಸಿರುವುದೇ ಒಂದು ರೀತಿ 'ದಿ ಬರ್ಡನ್' ನಾಟಿಕೆಯಲ್ಲಿ ಭರತನ ಸರಳತೆ ಎದ್ದು ತೋರುವುದು ; ತನ್ನನ್ನು 'ಚಿಕ್ಕ ರಾಜ' (Boy-King) ಎಂದು ಸಂಬೋಧಿಸುವುದನ್ನೂ ಅವನು ಸಹಿಸಲಾರ. ಎಲ್ಲರಲ್ಲಿಯೂ ಆತನಿಗಿದ್ದ ಪ್ರೀತಿ, ಹಿರಿಯರಲ್ಲಿ ಗೌರವ ಹಾಗೂ ಪ್ರಾಪಂಚಿಕ ವ್ಯವಹಾರಗಳಲ್ಲಿ ದೊಡ್ಡತನ-ಇಂತಹ ಒಳ್ಳೆಯ ನಡೆನುಡಿಗಳಿಂದ ಕೂಡಿದ ಆದರ್ಶಪ್ರಾಯನಾದ ಭರತನನ್ನು ಕೈಲಾಸಂ ಯುವಕರ ಮುಂದಿಟ್ಟಿದ್ದಾರೆ.

**ಪರಿಪೂರ್ಣನಾದ ಶಿಷ್ಯ**

ಕೈಲಾಸಂ ಅವರ ಮೇರುಕೃತಿಗಳಲ್ಲಿ ಒಂದಾದ 'ದಿ ಪರ್ಪಸ್' ನಾಟಕದಲ್ಲಿ ಶಿಷ್ಯನ ಪರಿಪೂರ್ಣತೆ ಏಕಲವ್ಯನ ಮೂಲಕ ಅಭಿವ್ಯಕ್ತವಾಗಿದೆ. ನಾಟಕಕರ್ತೃವಿನ ಪ್ರಕಾರ, ಶಿಕ್ಷಣಕ್ಕೆ ಅವಶ್ಯಕವಾದ ಐದು ಅಂಕಗಳು ಯಾವುವೆಂದರೆ ; ಭದ್ರ ಬುನಾ ದಿಯ ಮೇಲೆ ಶಿಷ್ಯನ ಹತೋಟಿ, ವ್ಯಾಸಂಗದಲ್ಲೇ ತನ್ಮಯನಾಗುವ ಯೋಗ್ಯತೆ, ತನ್ನ ಗುರುವಿನಲ್ಲಿ ಆಳವಾದ ಪ್ರೇಮ, ಬೋಧಿಸಲು ಗುರುವಿಗೆ ಹೃತ್ಪೂರ್ವಕ ಆಸಕ್ತಿ ಇರುವಿಕೆ; ಹಾಗೂ ಶಿಷ್ಯನ ಅನವರತ ಅಭ್ಯಾಸ. ಕೈಲಾಸಂ ಅವರು ಹೇಳುವಂತೆ ವಿದ್ಯಾಭ್ಯಾಸ ಒಂದು ತಪಸ್ಸು; ಶಿಷ್ಯ ಅದರಲ್ಲೇ ಮಗ್ನನಾಗಿ ಸಾಧನೆ ಮಾಡಬೇಕು.

ಅಲ್ಲದೆ ಅದರ ಉದ್ದೇಶವೂ ಮುಖ್ಯ ಏಕಲವ್ಯ ಧನುರ್ವಿದ್ಯೆಯನ್ನು ಕಲಿಯುವುದು ಅರಣ್ಯದಲ್ಲಿರುವ ಹುಲ್ಲೆಮರಿಗಳ ರಕ್ಷಣೆಗಾಗಿ, ಬಲಿಷ್ಟರ ಕ್ರೌರ್ಯದ ಹಿಡಿತದಿಂದ ದುರ್ಬಲರನ್ನು ಪಾರುಮಾಡುವುದಕ್ಕಾಗಿ. ಈ ಸಂದರ್ಭದಲ್ಲಿ ಕೈಲಾಸಂ 'ಕಾರ್ಮಿ' ಗಳನ್ನು ಮೂರು ವಿಧವಾಗಿ ವಿಂಗಡಿಸಿ, ಏಕಲವ್ಯನನ್ನು ಮೂರನೇ ಗುಂಪಿಗೆ ಸೇರಿಸುವರು; ಆ ಗುಂಪಿನವರ ಗುರಿ ಏನೆಂದರೆ ತಮ್ಮ ಶ್ರಮದ ಪ್ರತಿಫಲ ಸಂಪೂರ್ಣವಾಗಿ ಇತರರಿಗೇ, ತಮಗಲ್ಲ ಎಂಬುದು. ಶಿಷ್ಯನ ಮನೋಭಾವವನ್ನು ತನ್ನ ಕುಟುಂಬಕ್ಕೆ, ಸಂಸ್ಥೆಗೆ ಹಾಗೂ ದೇಶಕ್ಕೆ ಹೀಗೆ ನಿಸ್ವಾರ್ಥವಾಗಿರುವುದೇ ಶಿಕ್ಷಣದ ನಿಜವಾದ ಧ್ಯೇಯ.

'ದಿ ಕರ್ಸ್' (The curse) ಎಂಬ ಇನ್ನೊಂದು ಆಂಗ್ಲ ನಾಟಕದಲ್ಲಿ ಕೈಲಾಸಂ ಚಿತ್ರಿಸಿರುವ ಕರ್ಣ ಕಲಿಯುವುದರಲ್ಲಿ ಶ್ರದ್ಧಾವಂತ, ಅಸಹಾಯಕರಿಗೆ ನೆರವು ನೀಡಲು ಸದಾ ಸಿದ್ಧ, ಒಳ್ಳೆಯ ನಡತೆಯುಳ್ಳವ ಹಾಗು ಗುರು-ಹಿರಿಯರಲ್ಲಿ ಗೌರವ ಇಟ್ಟುಕೊಂಡಿರುವವನು. ನಾಟಕದ ಮೊದಲನೇ ದೃಶ್ಯದಲ್ಲೇ, ಕರ್ಣನ ಗುರುಗಳಾದ ಪರಶುರಾಮರು ಗುರುಗಳ ಬಗ್ಗೆ ಶಿಷ್ಯನಿಗಿರುವ 'ನಿಸ್ವಾರ್ಥ ಪ್ರೇಮ, ಗೌರವ ಮತ್ತು ವಿಧೇಯತೆ'ಗಳನ್ನು ಮನಸಾರೆ ಹೊಗಳಿ, "ನೀನು ನನ್ನ ಹೃದಯ ಸಮೀಪಕ್ಕೆ ಬಂದಿರುವೆ" ಎಂದು ಉದ್ಗರಿಸುವರು. ಜೊತೆಗೆ ಗುರುಗಳು ಕರ್ಣನಿಗೆ ಕೊಡುವ ಉಪದೇಶವಿದು "ನೀನು ಕಲಿತ ಶಸ್ತ್ರಾಸ್ತ್ರಗಳ ಶಕ್ತಿಯನ್ನು ಭೂಮಿಯ ಮೇಲೆ ಪರಿತಪಿಸುತ್ತಿರುವ ಜೀವಿಗಳ ರಕ್ಷಣೆಯ ಪವಿತ್ರ ಕಾರ್ಯಕ್ಕಾಗಿ ಉಪಯೋಗಿಸು. ಇದೇ ವಿದ್ಯಾರ್ಥಿಯ ಜ್ಞಾನಾರ್ಜನೆಯ ನಿಜವಾದ ಉದ್ದೇಶವಾಗಿರಬೇಕು."

ಕೈಲಾಸಂ ಕೊನೆಯಲ್ಲಿ ಕಲ್ಪಿಸಿದ್ದೆಂದು ಹೇಳಲಾದ 'ಕೀಚಕ' (Keechaka) ಎಂಬ ಆಂಗ್ಲ ನಾಟಕದ ನಾಯಕನಿಗೆ ತನ್ನ ಗುರು ಬಲರಾಮನಲ್ಲಿ ಆಳವಾದ ಗೌರವ. ಕೀಚಕನು ಒಂದು ಸಂದರ್ಭದಲ್ಲಿ ತನ್ನ ಗುರುವನ್ನು ಮರೆತ ತಪ್ಪನ್ನು ನೇರವಾಗಿ ಒಪ್ಪಿಕೊಳ್ಳುವನು. ಆತನ ಪ್ರಕಾರ, "ಒಬ್ಬನ ಅಂತಸ್ತಿಗೂ ತನಗಾಗಿ ಗಳಿಸುವ ವಿದ್ಯೆಗೂ ಸಂಬಂಧವಿಲ್ಲ; ತನ್ನ ಅಂತರಾತ್ಮವನ್ನು, ಅದಕ್ಕಿಂತ ಮಿಗಿಲಾಗಿ ಗುರುವನ್ನು ಸ್ಮರಿಸಿಕೊಳ್ಳುವುದೇ ಮುಖ್ಯ."

ಇನ್ನು, ತಮ್ಮ ಕೆಲವು ಕನ್ನಡ ನಾಟಕಗಲ್ಲೂ ಕೈಲಾಸಂ ನಿಜವಾದ ಶಿಕ್ಷಣದ ಬಗ್ಗೆ ನಮ್ಮ ಗಮನ ಸೆಳೆಯುತ್ತಾರೆ. ಮನೆಯಿಂದ ಹಿಡಿದು ಸಮಾಜದವರೆಗೆ ದೋಷಗಳನ್ನು ವಿಚಾರಾತ್ಮಕ ಹಾಸ್ಯದ ಮೂಲಕ ತೋರಿಸಿ, ಜನರ ನಡತೆಯನ್ನು ತಿದ್ದುವುದೂ ಅವರಿಗೆ ಹಿತವೆನಿಸಿದ ಕೆಲಸ. ಕನ್ನಡದ ರಂಗಭೂಮಿಯ ಮೇಲೆ ಮೊದಲಬಾರಿಗೆ ಅವರು ತಂದ ವೈವಿಧ್ಯಮಯ ಪಾತ್ರಗಳು ಯಾವುವೆಂದರೆ : ವಿಶ್ವವಿದ್ಯಾಲಯದ ಪದವಿ ಗಳಿಸಿದ್ದೂ ಟೊಳ್ಳಾಗಿರುವ ವಿದ್ಯಾರ್ಥಿಗಳು, ಬಹಳವಾಗಿ ನೊಂದ ವಿಧವೆಯರು, ಬಂಡವಾಳವಿಲ್ಲದೆ ಬಡಾಯಿ ಕೊಚ್ಚುವ ಲಾಯರುಗಳು, ತಮಗೇ ಅರಿವಿಲ್ಲದಂತೆಯೇ ಇತರರಿಗೆ ದೊಡ್ಡ ಉಪಕಾರಗಳನ್ನು ಎಸಗುವ ಹುಟ್ಟು-ಸ್ಕಾಟುಗಳು ಇತ್ಯಾದಿ.



### ತಾಯಿ – ನಿಜವಾದ ಗುರು

ಕೈಲಾಸಂ ಸ್ಪಷ್ಟವಾಗಿ ಘೋಷಿಸಿರುವ ಪ್ರಕಾರ, 'ಮಕ್ಕಳಿಸ್ಕೂಲ್ ಮನೇಲಲ್ವೇ ?' ಈ ಮಾತು ನೂರಕ್ಕೆ ನೂರರಷ್ಟು ಸತ್ಯ. ಅವರ ಪ್ರಸಿದ್ಧ ಕನ್ನಡ ನಾಟಕಗಳಲ್ಲೊಂದಾದ 'ಟೊಳ್ಳು-ಗಟ್ಟಿಯು' ಇಬ್ಬರು ಸಹೋದರರಲ್ಲಿ, ಪುಟ್ಟು ತನ್ನ ಸ್ಕೂಲಿನ ಶಿಕ್ಷಣದಲ್ಲಿ ಉದ್ದಕ್ಕೂ ಮುಂದಿದ್ದು, ಮನೆಯವರನ್ನೆಲ್ಲಾ ಕಡೆಗಣಿಸುತ್ತಾನೆ. ಆದರೆ ಮಾಧು ಈ ಶಿಕ್ಷಣದಲ್ಲಿ ಪೂರ್ತಿಯಾಗಿ ಸೋತರೂ, ತನ್ನ ತಾಯಿಯ ನಿರ್ದೇಶನದಲ್ಲಿ ಸೇವೆ ಹಾಗೂ ತ್ಯಾಗಗಳಿಂದ ಮನೆಯ ಶಾಲೆಯಲ್ಲಿ ಚೆನ್ನಾಗಿ ಉತ್ತೀರ್ಣನಾಗುತ್ತಾನೆ. ಹೊರಗಣ ಶಾಲೆಯಲ್ಲಿ ಪಡೆದ ಜಯಕ್ಕೆ ಮಾರುಹೋದ ತಂದೆ ಪುಟ್ಟುವಿಗೆ ಸಕಲ ಸೌಕರ್ಯಗಳನ್ನೂ ಕಲ್ಪಿಸಿಕೊಟ್ಟು, ಮಾಧುವನ್ನು ನಿರ್ಲಕ್ಷಿಸುತ್ತಾನೆ. ಕೊನೆಯಲ್ಲಿ, ಮಾಧು ರೋಗದಿಂದ ನರಳುತ್ತಿರುವಾಗ ತನ್ನ ತಾಯಿಗೆ ಶುಶ್ರೂಷೆ ಮಾಡುವುದರ ಜೊತೆಗೆ, ಮನೆಗೆ ಬೆಂಕಿ ಬಿದ್ದಾಗ ತನ್ನ ಜೀವನವನ್ನೂ ಲೆಕ್ಕಿಸದೆ ಮನೆಯವರನ್ನು ರಕ್ಷಿಸಲು ನುಗ್ಗುತ್ತಾನೆ ; ಆದರೆ ಪುಟ್ಟುವು ಆ ಜಾಗದಿಂದಲೇ ಓಡಿಹೋಗುತ್ತಾನೆ. ಆ ಸಂದರ್ಭದಲ್ಲಿ ಪಕ್ಕದ ಮನೆಯವರಿಂದ ಹೊರಹೊಮ್ಮಿದ ಉದ್ಗಾರ : "ಟೊಳ್ಳು ಟೊಳ್ಳೇ, ಗಟ್ಟಿ ಗಟ್ಟಿಯೇ !" ಅಲ್ಲದೆ, "ಈ ಭೂಮೀಲಿ ಜೀವಿಸೋಕೆ ದೇವರಿಗೆ ಕೊಡೋ ಬಾಡಿಗೆ ಎಂದರೆ ಸುತ್ತಮುತ್ತಲೂ ಇರೋ ಜನರಿಗೆ ಉಪಯೋಗವಾಗಿರೋದೇ" ಎಂಬ ಮುತ್ತಿನಂತಹ ಮಾತನ್ನು ನಾಟಕದ ತಾಯಿಯ ಮೂಲಕ ಕೈಲಾಸಂ ಹೇಳಿಸುವರು.

'ತಾಳೀಕಟ್ಟೋಕ್ಕೂಲೀನೇ' ಎಂಬ ನಾಟಕದಲ್ಲಿ ಅದರ ಹೆಸರೇ ಸೂಚಿಸುವಂತೆ, ವರದಕ್ಷಿಣೆಯ ಮೇಲೆ ಯುದ್ಧ ಸಾರಿರುವ ಕೈಲಾಸಂ 'ಬಂಡ್ವಾಳಿಲ್ಲದ್ಬಡಾಯಿ' ಎಂಬ ನಾಟಕದಲ್ಲಿ ಶಿಕ್ಷಣದ ಬಗ್ಗೆ ಹಾಸ್ಯಪೂರಕವಾಗಿ ವಿಚಾರಮಾಡಿದ್ದಾರೆ. ಬಡಾಯಿ ಕೊಚ್ಚಿಕೊಳ್ಳುವ ಲಾಯರ್ ಅಹೋಬ್ಲುವಿನ ಮಗ ಮುದ್ಮಣಿ 'ಎರಡುಬಾರಿ ಸಂಸ್ಕಾರ ಹೊಂದಿದ ಮೂರ್ಖಶಿಖಾಮಣಿ' (Double Distilled Duffer) : ಅವನ ಸಲುವಾಗಿ 'ವಿದ್ಯಾಭಿಮಾನಿದೇವತೆಯೇ ಕೃಶವಾಗಿದ್ದಾಳಂತೆ. ಕೇವಲ ಬಡಾಯಿ ಕೊಚ್ಚಿಕೊಳ್ಳುವ ಲಾಯರು ತನ್ನ ಮಗನಿಗೆ ಸರಿಯಾದ ಶಿಕ್ಷಣ ಕೊಡಿಸದೆ ಅವನನ್ನು ಈ ಗತಿಗೆ ತಂದಿದ್ದಾನೆ.

### ಆದರ್ಶ ಬಾಲಕ

ಸ್ಕಾಟ್ ಚಳುವಳಿಯನ್ನು ಆಧಾರವಾಗಿರಿಸಿಕೊಂಡು ಕೈಲಾಸಂ 'ಪೋಲಿಕಿಟ್ಟೀ' ಎಂಬ ಜನಪ್ರಿಯ ನಾಟಕವನ್ನು ರಚಿಸಿದ್ದಾರೆ. ಇದರಲ್ಲಿ ಬರುವ ಕಿಟ್ಟಿಯ ಪಾತ್ರವು

'ಟೊಳ್ಳು-ಗಟ್ಟಿ' ನಾಟಕದ ಆದರ್ಶ ಬಾಲಕನ ಇನ್ನೊಂದು ಮುಖವೆಂದು ತೋರುತ್ತದೆ. ಅಷ್ಟಾಗಿ ಶಾಲೆಯ ಶಿಕ್ಷಣ ಹೊಂದದ ಕಿಟ್ಟಿ ಎಂಬ ಬಡ ಬಾಲಕನು ಸಿಹಿ-ತಿಂಡಿ ಸಿಗುವುದೆಂಬ ಭರವಸೆಯ ಮೇಲೆ ಒಂದು ಬಾಲ-ಚಮೂ (Boy-Scout) ದಳವನ್ನು ಸೇರುತ್ತಾನೆ. ಆದರೆ, ತಾನೇ ಜನ್ಮತಃ ಸ್ಕೌಟ್ ಆದ್ದರಿಂದ, ತನಗೆ ತಿಳಿಯದಂತೆಯೇ ಅದರ ಆದರ್ಶಗಳಿಗೆ ಅನುಗುಣವಾಗಿ ನಡೆಯುತ್ತಾ ಇತರ ಸ್ಕೌಟು ಗಳಿಗೂ ಶಿಕ್ಷಣವೀಯುವನು. ಅವನು ಹೊರನೋಟಕ್ಕೆ ಒರಟುಸ್ವಭಾವದವನಂತೆ ಕಂಡುಬಂದರೂ, ಕಿಟ್ಟಿಯ ಹೃದಯ ಮೃದು ಅಲ್ಲದೆ, ಅವನಿಗಿರುವ ಸೇವಾಪ್ರಜ್ಞೆ ಅನೇಕ ಸಂದರ್ಭಗಳಲ್ಲಿ ಕಂಡುಬರುತ್ತದೆ : ಮಗುವನ್ನು ಬೈಸಿಕಲ್ ಅನಾಹುತದಿಂದ ತಪ್ಪಿಸುವುದು, ಜೀವನೋಪಾಯಕ್ಕಾಗಿ ಸೌದೆಹೊರೆಯನ್ನು ಹೊರಲು ವೃದ್ಧನಿಗೆ ನೆರವಾಗುವುದು ಇತ್ಯಾದಿ. ಕೊನೆಯಲ್ಲಿ ತನ್ನ ಜೀವದ ಹಂಗು ತೊರೆದು ಕಿಟ್ಟಿಯು ಬೆಂಕಿಬಿದ್ದ ಮನೆಯಿಂದ ಎಲ್ಲರನ್ನೂ (ಚಿಕ್ಕ-ಸ್ಕೌಟ್ 'ಮಗು'ವನ್ನೂ ಸಹ) ಸಂರಕ್ಷಿಸುವನು; ಇದು ಅವನ ತ್ಯಾಗಮಯ ಕಾರ್ಯದ ಪರಾಕಾಷ್ಠತೆ.

### 'ಶಿಕ್ಷಣ' ಎಂದರೇನು ?

'ಶಿಕ್ಷಣ' ಎಂಬ ಶಬ್ದದ ನಿಜವಾದ ಅರ್ಥವನ್ನು ಕೈಲಾಸಂ ತಮ್ಮ 'ಅಮ್ಮಾವ್ರ ಗಂಡ' ಎಂಬ ನಾಟಕದಲ್ಲಿ ಸ್ಪಷ್ಟಪಡಿಸಿದ್ದಾರೆ. ಅದರ ಮುಖ್ಯಪಾತ್ರಗಳಲ್ಲೊಂದಾದ ಕಮಲೂ ಹೇಳುವಂತೆ : 'Educate ಅಂದ್ರೇನು ? Derivation ನೋಡೋಣ. 'E' out........ 'Duco' to lead........ to lead out........ ಪೂರ್ವಜನ್ಮದ ಪ್ರಭಾವದಿಂದ್ಲೋ, ಗೋತ್ರದಿಂದ್ಲೋ ........ ರಕ್ತದಿಂದ್ಲೋ........ ಇಲ್ಲಾ, 'ಅಮ್ಮಾ, ಅಮ್ಮಾ' ಅಂತ ಬಾಯ್ಬಿಟ್ಟಾಗ್ನಿಂದ ಸ್ಕೂಲಿಗೆ ಬಂದು ಸೇರೋವರ್ಗೂ,— ನಾನ್ಹೇಳಿದ್ಹಾಗೆ 'ಸುಳ್ಳು ಹೇಳ್ಬಾರ್ದು,' "ಸುತ್ಮುತ್ಲೂ ಇರೋರ್ನ ಹಿಂಸಿಸಬಾರ್ದು," "ಎಲ್ಲರಿಗೂ ಉಪಯೋಗವಾಗಿರಬೇಕು" ಅಂತ, ಹೀಗೆಲ್ಲ ತಾಯಿ ಆದವಳು ಒಳಗಿಳಿಸಿರೋ ಗುಣಗಳ್ನ, ಸ್ಕೂಲುಗ್ಳು ಕಾಲೇಜುಗ್ಳು ಹೊರಕ್ಕೆಳ್ದು, ........ ಸ್ಕೂಲಿಗೆ ಬಂದ್ಮಕ್ಳು College ಬಿಟ್ಟು ಹೊರಗ್ಹೋಗೋವಾಗ, ಮನೆಗೂ, ಸಮಾಜಕ್ಕೂ ದೇಶಕ್ಕೂ ಉಪಯೋಗಿಗಳಾಗಿರೋ ಹಾಗೆ ಮಾಡೋದೇ Education ಉ ! ........ Childhood ನಲ್ಲಿ neglect ಮಾಡಿ. ........ spoil ಮಾಡಿ .... Bundles of selfishness ಆದ ಮಕ್ಳನ್ನ .... ಸ್ಕೂಲಿಗೆ ಕಳ್ಸಿದ್ರೆ ........ ಆ Schoolsoo ಎಂಥಾ perfect system of education ನ adopt ಮಾಡಿದ್ರೆ ತಾನೆ ಏನು ? ........ ಒಂದು ಚೊಂಬೂನೂ, ಒಂದು ಬಿಂದ್ಗೆನೂ ಬೀಳದ ಬಾವೀಲಿ ಎಂಥಾ ಪಾತಾಳಗರಡೀನ ಹಾಕಿ ಎಳದ್ರೂನೂ ಹ್ಯಾಗೆ ಒಂದ್ಪಾತ್ರೇನೂ ಹೊರಬೀಳೋದಿಲ್ವೋ, ಹಾಗೆ ಮನೇಲಿ spoilt ಆದ



## ಕನ್ನಡದ ಹಿರಿ ಆಸ್ತಿ ಮಾಸ್ತಿಗೆ ತೊಂಬತ್ತು ವರ್ಷ !

—ಎನ್. ಎಸ್. ಗದಗಕರ

ಕನ್ನಡಕೆ ಮಾಸ್ತಿ ಆಸ್ತಿಯು ಆಗಿರುವರೆಂದು
ಎಲ್ಲಿ ಯಾರೋ ಒಮ್ಮೆ ನುಡಿದದ್ದು ಕೇಳಿದ್ದೆ;
ನಡೆಯಲ್ಲಿ ನಯ ವಿನಯ, ವಾಣಿಯಲಿ ವಿದ್ವತ್ತೆ
' ಕೆಟ್ಟ ' ಎನ್ನುವ ಪದವು ಇವರ ಕೋಶದಲ್ಲಿಲ್ಲ !
' ಅಣ್ಣಾ ' ಎಂದೇ ಇವರು ಸಂಬೋಧಿಸುವ ಸರಣಿ
ಬರಿ ಮೋಹಕವು ಏಕೆ ? ವ್ಯಕ್ತಿತ್ವದೈಸಿರಿಯು !
ಕತೆ, ಕವನ ಒಂದಲ್ಲ, ನಾಟಕ, ವಿಮರ್ಶೆಯಲು
ಇವರ ಸರಿದೂಗುವರು ಕೈ ಬೆರಳಿನಲ್ಲೆಣಿಕೆ !
ಸರಕಾರಸೇವೆ ಹಿಂದಕೆ ಒಮ್ಮೆ ಇದ್ದರೂ
ಪತ್ರಿಕಾ ವ್ಯವಸಾಯ, ಸಿರಿಗನ್ನಡದ ಏಳ್ಗೆ
ಇಂದಿವರ ನರನಾಡಿಗಳಲಿ ಒಂದಾಗಿಹವು !
ಸಹಜ ಸುಂದರ ಬಂಧ ತಿಳಿ ವಿನೋದದಿ ಬೆರೆತು
ಇವರ ಶೈಲಿಗೆ ಮಿಂಚು ನಾವಿನ್ಯ, ಒದವಿಸಿತೆ !
ಇಂತಿವರು ಕನ್ನಡದ ಪ್ರಾಚಾರ್ಯರೆ ಅಲ್ತೆ ?

ಈ ಮಕ್ಕಳ selfishness ಹೊರಬಿದ್ದೀತೇ ಹೊರತು ........ ಇಲ್ಲದ ಗುಣಾನ ಎಲ್ಲಿಂದ ತಂದು ಹೊರಗ್ಹಾಕ್ಯಾರು........ mastress ಊ ........ profes-sorsers ಊ ! ........" ಸ್ವಾಮಿ ವಿವೇಕಾನಂದರು ಹೇಳುವಂತೆ "ಮಾನವನಲ್ಲಿರುವ ಪೂರ್ಣತೆಯನ್ನು ಹೊರಹೊಮ್ಮಿಸುವುದೇ ಶಿಕ್ಷಣ"; ಈ ವ್ಯಾಖ್ಯೆಗೂ ಕೈಲಾಸಂ ರವರ ವಿಚಾರ ಧಾರೆಗೂ ಎಷ್ಟು ಸಾಮ್ಯವಿದೆ ! ಜನಸಾಮಾನ್ಯರಿಗೆ ಬೋಧನೆ ಮಾಡ ತಕ್ಕ ನುಡಿಗಳು ಕೈಲಾಸಂ ಅವರ ನಾಟಕ ಗಳಲ್ಲೆಲ್ಲಾ ಹಾಸುಹೊಕ್ಕಾಗಿ ತುಂಬಿವೆ. ಉದಾಹರಣೆಗೆ- "ಮರ್ಯಾದೆ ಕೊಟ್ಟು ಮರ್ಯಾದೆ ತಗೊಳ್ಳೋದೇ ಮರ್ಮ ಸಾರ್.... ಮಹನೀಯರ್ದುರ್ !", "ದುಡ್ಡೂಂದ್ರೆ ದೂರ ಹೋಗು, ಹೃದಯಾಂದ್ರೆ ಹತ್ತಿರ ಬಾ", "ಲೋಕದಲ್ಲಿ ಕಷ್ಟಪಟ್ಟು ನರಳೋವ್ರು ದೇವರಿಗೆ ಸಮಾನ" ಇತ್ಯಾದಿ.

ಹೀಗೆ ಮಹರ್ಷಿಗಳಿಂದ ಸ್ಥಾಪಿಸಲ್ಪಟ್ಟು ಶ್ರೀ ಶಂಕರ ವಿವೇಕಾನಂದರೇ ಮೊದಲಾದ ಮಹಾಮಹಿಮರಿಂದ ಉದ್ಧಾರವಾದ ನಮ್ಮ ದೇಶದ ಶೈಕ್ಷಣಿಕ ಸಂಸ್ಕೃತಿಯು ಆಧುನಿಕ ಸಾಹಿತ್ಯದಲ್ಲೂ ವಿವಿಧ ರೂಪಗಳಲ್ಲಿ ಪ್ರವಹಿಸುತ್ತಿದೆ. ದೇಶಕ್ಕೆ ಈಗ ಬೇಕಾದ ಶಿಕ್ಷಣಪದ್ಧತಿಯಲ್ಲಿ ಈ ಭವ್ಯ ಸಂಸ್ಕೃತಿಯನ್ನು ಎತ್ತಿಹಿಡಿಯುವುದರ ಅವಶ್ಯಕತೆಯು ಕಡೆಗೆ ಕೈಲಾಸಂ ರಂತಹ ಶ್ರೇಷ್ಠ ಲೇಖಕರು ಎಲ್ಲರ ಗಮನವನ್ನು ಸೆಳೆದಿದ್ದಾರೆ. ●



ಕಾ
ವ್ಯ
ವಾ
ಹಿ
ನಿ

## ಬನ್ನಿ ಮಕ್ಕಳೆ ಬನ್ನಿ !

—ನಂದಕಿಶೋರ

ಬನ್ನಿಮಕ್ಕಳೆ ಬನ್ನಿ ಚಿಕ್ಕಮಕ್ಕಳು ನೀವು !
ನನ್ನ ಬಾಳನುಕರಿಸಿ ತೊರೆಯ ತೀರದಿ ಕುಳಿತು
ನೀಳವಾದುಸಿರೆಳೆದು ನಿಮ್ಮ ಮಕ್ಕಳ ತನವ
ತೇಲಿ, ಬಿಡಲೇಬೇಕು ಹುಡುಗರಾಗುವ ಮೊದಲು !
ಹುಟ್ಟುತಲೆ ಕಟ್ಟಿ ತೊಟ್ಟಿಲೊಳಿರಿಸಿ ತೂಗಿದರು
ಲಾಲಿ ಜೋಗುಳಹಾಡಿ ಮಗುವೆಂದು ಮುದ್ದಿಟ್ಟು
ಹಿರಿಕಿರಿಯರೆಳೆದಾಡಿ ಕಾಡಿದರು, ಆಡಿದರು !
ನಾ ಬೆಳೆದ ಮೇಲಿಂದು ಬಿಸುಸುಯ್ಯು ತಿರುವೆ !
ಅಮ್ಮನೋರ್ವಳ ನುಳಿದು ಬಂಧುಗಳನರಸಿಲ್ಲ !
ಹಾಲ ನೊಂದನು ಬಿಟ್ಟು ತಿಂಡಿಯನು ಕೇಳಿಲ್ಲ !
ಅಳುವರಳಲಿನ ಕೂಡೆ ನಕ್ಕು ನಲಿದೂ ಇರುವೆ !
ನಗುವ ತುಟಿಗಳ ಕಂಡು ಅತ್ತು ನಕ್ಕೂ ಇರುವೆ !
ಹೊಸಮೊಗದ ಕಡೆಗಿಣುಕಿ ತಾಯಿ ಸೆರಗಿನೊಳವಿತು
ಹಳೆಯ ಮುಖಗಳನರಸಿ ನಾಲ್ದೆಸೆಗು ತಿರುಗಿತಿರುವೆ !
ಹಿರಿಕಿರಿದರರಿವಿಲ್ಲ; ನೋವು ಸಂಕಟವಿಲ್ಲ !
ಸಾವು ಜೀವದ ಕಡೆಗೆ ಮುಖ ತಿರುಗಿಸಲೆ ಇಲ್ಲ !
ನಚ್ಚಿ ತಾಯಿಯ ಕರೆದೆ ಅಬ್ಬಬ್ಬೆ ಬಾಯೆಂದು
ಅತ್ತತ್ತ ! ಅಬ್ಬಬ್ಬ ! ಎಂದಿರ್ದೆ ನಪ್ಪನನು !
ಎಲ್ಲ ಮರೆತನು ಅಂದು ಎಲ್ಲ ಮರೆತರು ಕೂಡೆ
ಎಂಟು ತುಂಬುವ ಮೊದಲೆ ನಾ ಬೆಳೆದ ಹುಡುಗ !
ಬೆಳೆದು ಬಾಗುವ ಮೊದಲೆ ಎಲ್ಲ ಸರಿದರು ದೂರ
ಮನದ ಭಾವಗಳಂತು ತಾವೆ ಕಳಚುರುಳಿದವು
ನನ್ನನೋರ್ವನೆ ಬಿಸುಟು ಹಡುಗ ನೀ ನಿಂದೆಂದು
ನಿನ್ನ ಮಗುವಿನ ತನುವು ಇನ್ನು ನಿನಗೇಕೆಂದು
ಎಂದೊ ಸಂಭವಿಸಳಿದ ಹಳೆಯ ನೆನಪಿಗೆ ಸೋತು
ಇಂದಳಲಿ ಬಿಸು ಸುಯ್ದು ಸುಯ್ವನೆದೆ ಸಂಕಟಕೆ
ಅಳಿದುದೇ ನನ್ನ ಕಂದನ ತನವು ಇನ್ನೆಲ್ಲಿ !
ಎಂದಳಲಿ ನುಡಿದಿರುವೆ ಕಿರಿಯ ಗೀತಿಕೆಯೊಂದ
ಬನ್ನಿ ಮಕ್ಕಳೆ .................... ಮೊದಲು !





# ಕಾಶ್ಮೀರ ಶಿವಾದ್ವೈತ ಸಿದ್ಧಾಂತ

—ಡಿ. ಜೆ. ರುದ್ರಪ್ಪ

**ಕಲಾ** :—ಇದು ಕಿಂಚಿತ್ಕರ್ತೃತ್ವವನ್ನು ತೋರಿಸುತ್ತದೆ.

**ವಿ ದ್ಯಾ** :—ವಿದ್ಯೆಯು ಪ್ರಮಾತೃವಿನ ಕಿಂಚಿಜ್ಞತ್ವವನ್ನು ತೋರ್ಪಡಿಸು
ತ್ತಿರುವುದಾಗಿದೆ. ಇದು ಪ್ರಮಾತೃ ಪ್ರಮೇಯಗಳೆರಡರಲ್ಲೂ ತೋರುತ್ತಿರುತ್ತದೆ.

**ರಾಗ** :—ಇದು ನನಗೆ ಬೇಕು ಎಂಬ ಆಸೆ ಹುಟ್ಟುವುದು.

**ನಿಯತಿ** :—ರಾಗವು ಪಾರವಿಲ್ಲದೆ ಪ್ರಸರಿಸಿದರೂ ಕಾರ್ಯಕಾರಣ ಭಾವಗಳ
ಗನುಸಾರವಾಗಿ ಫಲ ಪ್ರಾಪ್ತಿಯನ್ನುಂಟುಮಾಡುವುದೇ ನಿಯತಿ.

**ಕಾಲ** :—ಇದು ಪ್ರಮಾತೃವಿನಲ್ಲಿದ್ದು ಪ್ರಮೇಯದಲ್ಲಿಯೂ ಪ್ರಸರಿಸುತ್ತದೆ.
ನಾನು ಸಣ್ಣಗಿದ್ದೆ ಈಗ ದಪ್ಪಗಾಗಿದ್ದೇನೆ, ನನಗೆ ವಯಸ್ಸಾಯಿತು ಮುಂತಾದ ವ್ಯವ
ಹಾರಗಳು' ನಾನು ಎಂಬ ಪ್ರಮಾತೃಗಳಿಗೂ ಭೂತರೂಪವಾದ ಸಣ್ಣ-ದಪ್ಪವಾದ
ಶರೀರಕ್ಕೂ ಅನ್ವಯಿಸುತ್ತವೆ. ಸ್ವಸ್ವರೂಪದಿಂದ ಇವನು ಕಾಲಾಧೀನನಾಗದಿದ್ದರೂ
ಮಾಯಾಪ್ರಭಾವದಿಂದ ಇವನು ಕಾಲಕ್ಕೆ ಅಧೀನನಾಗಿರುವವನಂತೆ ವ್ಯವಹಾರ
ಮಾಡುತ್ತಾನೆ.

ಮೊದಲು ಸ್ವರೂಪಾಭಿನ್ನವಾಗಿರುವ ಚಿತ್, ಆನಂದ, ಇಚ್ಛಾ, ಜ್ಞಾನ,
ಕ್ರಿಯಾಶಕ್ತಿಗಳು ಕ್ರಮವಾಗಿ ಸರ್ವ ಕರ್ತೃತ್ವ, ಸರ್ವಜ್ಞತ್ವ, ನಿತ್ಯತ್ವ, ವ್ಯಾಪಕತ್ವ
ಎಂಬ ಪ್ರಭಾವವುಳ್ಳವುಗಳಾಗಿದ್ದವು. ಇವುಗಳೇ ಅಶುದ್ಧಾಧ್ವದಲ್ಲಿ ಕಲಾ ವಿದ್ಯಾ
ರಾಗ ಕಾಲ ನಿಯತಿ ರೂಪಗಳಿಂದ ಮಾರ್ಪಟ್ಟವು ಇವುಗಳನ್ನೇ ಪಂಚ ಕಂಚುಕಗ
ಳೆಂದು ಹೇಳುವುದು. ಈ ಶಕ್ತಿಗಳ ಸಂಪೂರ್ಣ ವಿಕಾಸವಿದ್ದಾಗ ಶಿವನು, ಸಂಕುಚಿ
ತವಾಗಿದ್ದಾಗ ಬದ್ಧ ಜೀವನು, ಈ ಐದು ತತ್ವಗಳಿಂದ ಕೂಡಿ ಮಿತ ಪ್ರಮಾತೃವಾಗಿ
ದ್ದಾನೆ. ತನ್ನ ಕ್ರಿಯಾಶಕ್ತಿ ತನ್ನ ತಿಳಿವಳಿಕೆ ತನ್ನ ಆಸೆ ತನ್ನ ಪರಿಮಿತಿ ತನ್ನ
ಸ್ವಭಾವ ಧರ್ಮ ಇವುಗಳನ್ನು ವಿಶದವಾಗಿ ತಿಳಿದು ತತ್ವ ಜ್ಞಾನಿಯು ಜೀವನ
ವನ್ನು ನಡೆಸುತ್ತಾನೆ. ಈ ಐದು ತತ್ವಗಳು ಪ್ರಮೇಯಗಳಾಗಿಯೇ ಇದ್ದರೂ

ಕಲಾಕರ್ತೃತ್ವ ಸಾಮರ್ಥ್ಯಂ ಕಿಂಚಿನ್ಮಾತ್ರಂ ಪ್ರಕೀರ್ತಿತಂ ।
ತಾದೃಶಂ ಜ್ಞಾನಸಾಮರ್ಥ್ಯಂ ವಿದ್ಯಾ ತತ್ವಂ ಇತಿಸ್ಮೃತಃ
ಇದಮೇವ ಇಷ್ಟಮಸ್ತೀತಿ ರಾಗ ಪಾಶೋಸ್ತಿಬಂಧನಂ
ಇದಾನೀಂತನ ಭಾವೇಸ್ಮಿ ಕಾಲೋಪ್ಯಾ ಕಲನಂ ಮತಂ
ನಿಯತತ್ವಂ ಕರ್ಮಫಲಂ ನಿಯತ್ಯಾತ್ಮಕತಾತ್ಮನಃ
ಏತೇಷಾಂ ಅವಿವೇಕೋಯಃ ಸಾಮಾಯಾ ಮೋಹಿನೀಯತಃ

ಬಣ್ಣವು ಬಟ್ಟೆಯನ್ನಂಟಿಕೊಂಡಿರುವ ಹಾಗೆ ಪ್ರಮಾತೃವಿಗೆ ಅಂಟಿಕೊಂಡು ಅವನನ್ನು ಬಿಡದಿರುವವುಗಳಾಗಿವೆ. ಇವು ಈಶ್ವರ ಶಕ್ತಿ ರೂಪಗಳಾಗಿದ್ದರೂ ಪ್ರತಿಯೊಂದು ಪ್ರಮಾತೃವಿಗೂ ಬೇರೆ ಬೇರೆಯಾದ ತಾರತಮ್ಯವನ್ನುಂಟುಮಾಡುವವುಗಳಾಗಿರುತ್ತವೆ.

ಸಪ್ತ ಪ್ರಮಾತೃವರ್ಗದ ಮಂತ್ರ, ಮಂತ್ರೇಶ್ವರ, ಮಂತ್ರ ಮಹೇಶ್ವರರಿಗೆ ೩೩ ಪ್ರಮೇಯಗಳು ಸಾಕ್ಷಾತ್ತಾಗಿ ತಿಳಿಯುತ್ತವೆ. ಸಕಲರಿಗೆ ( ಸಂಸಾರಿಗಳಿಗೆ ) ಅನುಮಾನ ಆಗಮಾದಿ ಪ್ರಮಾಣಗಳ ದ್ವಾರಾ ಪ್ರಮೇಯಗಳಾಗುತ್ತವೆ. ಕಲಾದಿ ತತ್ವಗಳು ಪ್ರಮೇಯಗಳಾಗಿದ್ದರೂ ಪ್ರಮಾತೃಸ್ವಭಾವವನ್ನು ಪಡೆದಿರುವವುಗಳಾಗಿರುವುದರಿಂದ ಪ್ರಮೇಯಗಳೆಂದು ವ್ಯವಹಾರವಿಲ್ಲ ಪ್ರಮಾತೃವೇ ಪ್ರಮೇಯವಾಗಿರುವುದರಿಂದ ಪ್ರಮೇಯಗಳಿಂದ ಪ್ರಮಾತೃವು ಆಚ್ಛಾದಿತನಾಗಿರುತ್ತಾನೆ.[1] ಕಲಾದಿ ಪಂಚ ಕಂಚುಕಗಳು ಪ್ರಮಾತೃವಿನ ರೂಪದಲ್ಲಿ ಸೇರಿಹೋಗಿವೆ. ಈ ಪಂಚಕಂಚುಕಗಳಿಂದ ಆವೃತನಾದವನೇ ಪುರುಷ. ಇವನಿಗೆ ಸತ್ವರಜಸ್ತಮಸ್ಸುಗಳ ಪ್ರಭಾವದಿಂದ ಕೂಡಿದ ದೇಹ, ಇಂದ್ರಿಯ ಮತ್ತು ಅಂತಃ ಕರಣಗಳನ್ನು ಒದಗಿಸುವುದೇ ಪ್ರಕೃತಿ. ಈ ಪ್ರಕೃತಿಯು ಅಂತಃಕರಣ, ಇಂದ್ರಿಯಗಳು, ತನ್ಮಾತ್ರಗಳು ಮತ್ತು ಭೂತಗಳಿಗೆ ಮೂಲವಾಗಿರುತ್ತದೆ. ಪ್ರಕೃತಿಯಿಂದ ಕೇಗಿರುವ ಹದಿಮೂರುಕರಣಗಳು (ಬುದ್ಧಿ ಅಹಂಕಾರ ಮನಸ್ಸು ಐದು ಜ್ಞಾನೇಂದ್ರಿಯಗಳು ಐದು ಕರ್ಮೇಂದ್ರಿಯಗಳು) ಶರೀರವನ್ನು ಧರಿಸುವುದಕ್ಕೆ ಸಾಧನಗಳಾಗಿವೆ. ಪಂಚಭೂತಗಳು ತನ್ಮಾತ್ರಗಳು ಶರೀರವಾಗಿವೆ. ಅಧ್ಯವಸಾಯಕ್ಕೆ ಕಾರಣವಾಗಿರುವುದು ಬುದ್ಧಿ. ಗ್ರಾಹ್ಯಗ್ರಾಹಕ ರೂಪವಾದದ್ದು ಅಹಂಕಾರ. ಸಂಕಲ್ಪಾದಿ ಭಾವೋದ್ರೇಕಗಳಿಗೆ ಕಾರಣವಾಗಿ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳ ಮೂಲಕ ಉಂಟಾಗುವ ಎಲ್ಲಾ ಜ್ಞಾನಗಳಿಗೂ ಆಕರವಾಗಿರುವುದು ಮನಸ್ಸು. ಮಾಯೆಯಿಂದ ಈ ಮೂವತ್ತು ತತ್ವಗಳು ಸೃಷ್ಟಿಯಾಗಿದ್ದರೂ ಮಾಯಿಾಯಗಳಾದ ದೇಹೇಂದ್ರಿಯಗಳಿಂದ ಜೀವನ ಜ್ಞಾನ ಸಂಕೋಚವು ಏರ್ಪಡುತ್ತಲಿರುತ್ತದೆ. ಆದುದರಿಂದ ಮಾಯೆಯು ಜೀವನ ಜ್ಞಾನ ಸಂಕೋಚಕ್ಕೆ ಸಾಕ್ಷಾತ್ಕಾರಣವಾಗಿಯೂ ಇದೆ. ದೇಹ ಇಂದ್ರಿಯಾದಿಗಳ ಮೂಲಕ ಪರಂಪರಾ ಕಾರಣವಾಗಿಯೂ ಇದೆ. ಜ್ಞಾನ ಸಂಕೋಚಕ್ಕೆ ಮಾಯೆ ಕಾರಣವೆನ್ನುವಾಗ ಈ ಎರಡಂಶಗಳನ್ನು ಲಕ್ಷ್ಯದಲ್ಲಿಡಬೇಕು.

1 ಅಚ್ಛಾದಿತ ಪ್ರಮೇಯತಾಕಃ ಪ್ರಮಾತ್ರೀ ಕ್ರಿಯಮಾಣಶ್ವಸಃ !



ಶುದ್ಧ ವಿದ್ಯಾತತ್ವಗಳಲ್ಲಿರುವ ಶಿವತತ್ವದಲ್ಲಿ ಇಚ್ಛಾಜ್ಞಾನ ಕ್ರಿಯಾಶಕ್ತಿಗಳು ಯಾವರೀತಿ ಸಾಮ್ಯಾವಸ್ಥೆಯಲ್ಲಿರುತ್ತವೆಯೋ ಅದೇ ರೀತಿಯಾಗಿ ಅಶುದ್ಧ ಸೃಷ್ಟಿಯಲ್ಲಿ ಪ್ರಕೃತಿಯು ಸತ್ವ ರಜ ಸ್ತಮಸ್ಸುಗಳ ಸಾಮ್ಯಾವಸ್ಥೆಯಿಂದ ಪ್ರಶಾಂತ ಸಾಗರದಂತಿರುತ್ತದೆ. ಸತ್ವ ರಜಸ್ತಮಸ್ಸುಗಳ ತಾರತಮ್ಯದಿಂದ ಮಿಕ್ಕ ೨೩ ತತ್ವಗಳ ಸೃಷ್ಟಿಯಾಗುತ್ತದೆ. ಪ್ರಕೃತಿಯಿಂದ ಬುದ್ಧಿ, ಇದನ್ನು ಮಹತ್ತೆಂದು ಕೆಲವರು ವ್ಯವಹರಿಸುತ್ತಾರೆ. ಈ ಬುದ್ಧಿಯು ಇದೇ ಸರಿಯೆಂದು ನಿರ್ಣಯಮಾಡುವ ಶಕ್ತಿಯಾಗಿರುತ್ತದೆ. ಇದು ಸರಿಯೇ ತಪ್ಪೇ ಎಂದು ವಿವೇಚನೆ ಮಾಡುವಾಗ ಕೊನೆ ತೀರ್ಮಾನವು ಬುದ್ಧಿಯಿಂದುಂಟಾಗುತ್ತದೆ. ಇದಕ್ಕೆ ಅಧ್ಯವಸಾಯವೆಂದು ಹೆಸರು.

ಮುಂದಿನ ತತ್ವವೇ ಅಹಂಕಾರ ತನ್ನ ಸ್ವರೂಪಕ್ಕೆ ಸೇರದಿರುವ ವಿಷಯಗಳನ್ನು ತಾನೆಂದು ಭಾವಿಸುವಿಕೆಯೇ ಅಹಂಕಾರ. ಈ ಅಹಂಕಾರದ ದೆಸೆಯಿಂದ ಗ್ರಾಹ್ಯ ಮತ್ತು ಗ್ರಾಹಕಗಳಲ್ಲಿ ಭೇಧ ಜ್ಞಾನ ಪೂರ್ವಕವಾದ ಅಭಿಮಾನವುಂಟಾಗುತ್ತದೆ. ನಾನು ನನ್ನದು ಎಂಬ ನಿಶ್ಚಿತವಾದ ಆಕಾಂಕ್ಷೆಯುಂಟಾಗುತ್ತದೆ. ಇದರಿಂದ ಸುಖ ದುಃಖಗಳಿಗೆ ಹೆಚ್ಚು ಅವಕಾಶ : ಅಹಂಕಾರವಿಲ್ಲದಿರುವವರಿಗೆ ಹೆಚ್ಚು ಸುಖವೂ ಇಲ್ಲ. ಅಹಂಕಾರದ ಅನುಭವವು ಗ್ರಾಹ್ಯ ಗ್ರಾಹಕಗಳಲ್ಲಿ ಶುದ್ಧವಾದ ವ್ಯತ್ಯಾಸವನ್ನು ತಿಳಿಯಪಡಿಸದೆ ಸಮ್ಮೋಹವನ್ನುಂಟುಮಾಡುತ್ತದೆ. ಲೋಕರೂಢಿಯಾಗಿ ಅಹಂಕಾರವನ್ನು ಹೆಮ್ಮೆ ಜಂಭಗರ್ವ ಮುಂತಾದ ದುರ್ಗುಣಗಳಿಗೆ ಪರ್ಯಾಯ ಪದವಾಗಿ ಉಪಯೋಗಿಸುತ್ತಾರೆ.

**ಮನಸ್ಸು** :— ಇದು ವಿಷಯ ಸಂಕಲ್ಪಗಳಿಗೆ ಕಾರಣವಾಗಿಯೂ ವಿಷಯ ಜ್ಞಾನ, ಲಜ್ಜೆ, ಕೋಪ ಮುಂತಾದ ವಿಕಾರಗಳಿಗೆ ಆಶ್ರಯವಾಗಿಯೂ ಇದೆ. ಮನಸ್ಸಿಗೆ ಬರುವ ಎಲ್ಲಾ ಭಾವನೆಗಳೂ ದೇಶ ಕಾಲ ಆಕಾರ ಇವುಗಳನ್ನು ಕೂಡಿಯೇ ಬರುತ್ತವೆ. ಸ್ಮೃತಿ ತಾಪ ಮುಂತಾದ ಆಂತರಂಗಿಕವಾದ ಅನುಭವಗಳು ಇದರಿಂದಲೇ ಉಂಟಾಗುತ್ತವೆ. ಜ್ಞಾನೇಂದ್ರಿಯಗಳಿಂದಲ್ಲೂ ಕರ್ಮೇಂದ್ರಿಯಗಳಿಂದಲೂ ಹತ್ತು ವಿಧವಾದ ತಿಳಿವಳಿಕೆಗಳುಂಟಾಗುತ್ತವೆ. ಅ ಹತ್ತು ವಿಧವಾದ ತಿಳಿವಳಿಕೆಗಳಿಗೂ ಇದು ಆಶ್ರಯವಾಗಿರುತ್ತದೆ. ಇದರ ಸಹಾಯವಿಲ್ಲದೆ ಯಾವ ಇಂದ್ರಿಯಕ್ಕೂ ಸ್ವತಂತ್ರವಾಗಿ ತಿಳಿವಳಿಕೆಯನ್ನುಂಟುಮಾಡುವ ಯೋಗ್ಯತೆ ಇಲ್ಲ. ನಾವು ಏನೋ ಒಂದು ಬೇರೆ ಯೋಚನೆಯನ್ನು ಮಾಡುತ್ತಿದ್ದಾಗ ಕಣ್ಣು ನೋಡುತ್ತಿದ್ದರೂ, ಕಿವಿ ಕೇಳುತ್ತಿದ್ದರೂ ಕಣ್ಣು ಕಾಣಿಸುವುದಿಲ್ಲ. ಕಿವಿ ಕೇಳಿಸುವುದಿಲ್ಲ. ಇದರಿಂದ ಹೊರಗಿನ ತಿಳುವಳಿಕೆಗೆ ಮನಸ್ಸು ಮುಖ್ಯ ಕಾರಣವೆಂದು ಸಿದ್ಧವಾಗುತ್ತದೆ.

**ಜ್ಞಾನೇಂದ್ರಿಯಗಳು ಐದು** :— ಇವು ಸಾತ್ವಿಕಾಹಂಕಾರದಿಂದ ಹುಟ್ಟಿರುತ್ತವೆ. ಇವುಗಳ ಸ್ವರೂಪ ಅತಿ ಸೂಕ್ಷ್ಮವಾಗಿರುವುದರಿಂದ ಭೌತಿಕವಿಲ್ಲದೆ ಇವು ಕೆಲಸಮಾಡಲಾರವು. ಈ ಐದು ಜ್ಞಾನೇಂದ್ರಿಯಗಳಿಗೂ ಐದು ಕರ್ಮೇಂದ್ರಿಯಗಳಿಗೂ ಈ ಭೌತಿಕ ಶರೀರವಿದ್ದಾಗಲೇ ಪ್ರವೃತ್ತಿ. ಕಿವಿಯಿಂದ ಕೇಳುತ್ತೇವೆ, ಕಣ್ಣಿನಿಂದ

ನೋಡುತ್ತೇವೆ, ಮೂಗಿನಿಂದ ವಾಸನೆಯನ್ನು ಕಂಡುಹಿಡಿಯುತ್ತೇವೆ, ನಾಲಿಗೆಯಿಂದ ರುಚಿ ನೋಡುತ್ತೇವೆ, ಚರ್ಮದಿಂದ ಮುಟ್ಟುತ್ತೇವೆ, ಆದರೆ ಒಂದು ಇಂದ್ರಿಯದ ಕೆಲಸವು ಇನ್ನೊಂದು ಇಂದ್ರಿಯದಿಂದ ನಡೆಯುವುದಿಲ್ಲ. ಕಿವಿಯಿಂದ ನೋಡಲಾರೆವು, ಕಣ್ಣಿನಿಂದ ಕೇಳಲಾರೆವು.

**ಕರ್ಮೇಂದ್ರಿಯಗಳು ಐದು** :— ಮೇಲೆ ಹೇಳಿದ ರೀತಿಯೇ ಕರ್ಮೇಂದ್ರಿಯಗಳಾದ ವಾಕ್ ಪಾಣಿ ಪಾದ ಪಾಯುಉಪಸ್ಥ ಇವುಗಳು ಒಂದರ ಕೆಲಸವನ್ನು ಇನ್ನೊಂದು ಮಾಡಲಾರವು. ಹೀಗೆ ಸಾತ್ವಿಕಾಹಂಕಾರದಿಂದ ಈ ಐದು ಕರ್ಮೇಂದ್ರಿಯಗಳು ಮೇಲೆ ಹೇಳಿದ5 ಜ್ಞಾನೇಂದ್ರಿಯಗಳಮತ್ತು ಮನಸ್ಸು ಈಹನ್ನೊಂದೂ ಹುಟ್ಟಿರುತ್ತವೆ.

ತಾಮಸಾಹಂಕಾರದಿಂದ ಶಬ್ದ ಸ್ಪರ್ಶ ರೂಪರಸ ಗಂಧ ತನ್ಮಾತ್ರಗಳೂ ಈ ತನ್ಮಾತ್ರಗಳಿಂದ ಕ್ರಮವಾಗಿ ಆಕಾಶವಾಯು ಅಗ್ನಿ ನೀರು ಭೂಮಿ ಹೀಗೆ ಪಂಚಭೂತಗಳೂ ಹುಟ್ಟುತ್ತವೆ. ಈ ಐದು ಭೂತಗಳಲ್ಲಿಯೂ ಪರಸ್ಪರ ವೈಲಕ್ಷಣ್ಯವಿದೆ. ಭೂಮಿಯಲ್ಲಿ ಶಬ್ದಸ್ಪರ್ಶ ರೂಪ ರಸ ಗಂಧಗಳೂ ನೀರಿನಲ್ಲಿ ಶಬ್ದಸ್ಪರ್ಶ ರೂಪರಸಗಳೂ ಅಗ್ನಿಯಲ್ಲಿ ಶಬ್ದಸ್ಪರ್ಶ ರೂಪಗಳೂ ವಾಯುವಿನಲ್ಲಿ ಸ್ಪರ್ಶಶಬ್ದಗಳೂ ಆಕಾಶದಲ್ಲಿ ಶಬ್ದಮಾತ್ರವೂ ಇರುತ್ತವೆ. ಈ ಪಂಚಭೂತಗಳ ಸಹಾಯವಿಲ್ಲದೆ ಜ್ಞಾನೇಂದ್ರಿಯಗಳ ಕೆಲಸ ನಡೆಯುವುದಿಲ್ಲ. ಆಕಾಶದ ಅವಕಾಶವಿಲ್ಲದೆ ಶಬ್ದ ಕೇಳಿಸುವುದಿಲ್ಲ. ವಾಯುವಿಲ್ಲದಿದ್ದರೆ ಸ್ಪರ್ಶ ತಿಳಿಯುವುದಿಲ್ಲ. ಬೆಳಕಿಲ್ಲದಿದ್ದರೆ ಕಣ್ಣು ಕಾಣಿಸುವುದಿಲ್ಲ ನೀರಿಲ್ಲದಿದ್ದರೆ ರಸ ತಿಳಿಯುವುದಿಲ್ಲ ಭೂಮಿಯಿಲ್ಲದಿದ್ದರೆ ಅಂದರೆ ಭೂಮಿಯಲ್ಲಿ ಬೆಳೆದ ವಸ್ತುವಿಲ್ಲದಿದ್ದರೆ ವಾಸನೆಯಿಲ್ಲ. ಹೀಗೆ ಬಾಹ್ಯ ಪ್ರಪಂಚವೆಲ್ಲಾ ಪಂಚಭೂತಮಯವಾಗಿದೆ. ಈ ಪಂಚಭೂತಗಳು ಇಂದ್ರಿಯಗಳಿಗೆ ಸಹಾಯಕಗಳಾಗಿವೆ. ಪ್ರಮಾತೃಗಳ ಸುಖ ದುಃಖಗಳಿಗೆ ಕಾರಣಗಳಾಗಿವೆ. ಜ್ಞಾನಿಯು ತನಗುಂಟಾಗುವ ಶಾರೀರಿಕ ಮತ್ತು ಮಾನಸಿಕ ಉದ್ವೇಗಗಳಲ್ಲಿ ವಿವೇಚನೆಯಿಂದ ಶಾರೀರಿಕವಾದ ಉದ್ವೇಗಗಳೆಷ್ಟು ಐಂದ್ರಿಯಿಕವಾದ ತೊಂದರೆಗಳೆಷ್ಟು ಮಾನಸಿಕವಾದ ಉಬ್ಬರವಿಳಿತಗಳೆಷ್ಟು ಎಂದು ತಿಳಿಯುತ್ತಾನೆ. ಇಂತಹ ವಿವೇಚನೆಯಿಂದ ಸುಖದುಃಖಗಳು ಗ್ರಾಹಕನ ಸ್ವಸ್ವರೂಪದಲ್ಲಿಲ್ಲವೆಂದೂ ಕರಣಗಳ ಮೂಲಕ ಪ್ರಮೇಯಗಳಿಂದುಂಟಾಗುತ್ತಿವೆಯೆಂದೂ ತಿಳಿದು ಶಾಂತನಾಗಿ ಸ್ವಸ್ವರೂಪಾನುಸಂಧಾನದಲ್ಲಿ ಆನಂದವನ್ನನುಭವಿಸುತ್ತಾನೆ.

ಪಂಚಭೂತಗಳ ಮಿಶ್ರಣದಿಂದ ಘಟಾದಿ ಪದಾರ್ಥಗಳು ಸ್ವಲಕ್ಷಣ ( ಇತರ ಸಂಬಂಧವಿಲ್ಲದೆ ತನನ್ನು ಮಾತ್ರ ತೋರ್ಪಡಿಸಿಕೊಳ್ಳುವುದು) ಭಾವದಿಂದ ಕರ್ಮೇಂದ್ರಿಯಗಳ ದ್ವಾರಾಸೇರಿ ಜ್ಞಾನೇಂದ್ರಿಯಗಳಿಂದ ಆಲೋಚಿಸಲ್ಪಟ್ಟು ಅಂತಃಕರಣದಲ್ಲಿ ಸಂಕಲ್ಪ ಮತ್ತು ಅಭಿಮಾನದಿಂದ ನಿಶ್ಚಯಿಸಲ್ಪಟ್ಟು ಬುದ್ಧಿಯಿಂದ ವಿವೇಚಿಸಲ್ಪಟ್ಟು ಕಲಾದಿತತ್ವಗಳೊಡನೆ ಸೇರಿ ಪ್ರಮಾತೃವಿನಲ್ಲಿ ಕೊನೆಗೊಳ್ಳುತ್ತವೆ, ಅಂದರೆ ಪೃಥವ್ಯಾದಿ ಅಭಾಸಗಳು ಚಿತ್ತಿನಲ್ಲಿ ವಿಶ್ರಾಂತಿಯನ್ನು ಪಡೆಯುತ್ತವೆಂಬುದೇ ಇದರ ಮುಖ್ಯ ಅಭಿಪ್ರಾಯ.



೬೯ ನೆಯ ವರ್ಷದಲ್ಲಿ ಪಾದಾರ್ಪಣೆಮಾಡಿದ

# ಪರಮ ಪೂಜ್ಯ ಶ್ರೀ ಮಹಾಂತಪ್ಪಗಳು

—ಎಸ್. ಎಸ್. ಭೂಸರೆಡ್ಡಿ

ಕನ್ನಡಿಗರ ಪುಣ್ಯವೇ ಹಣ್ಣಾದಂತೆ ಮೈವೆತ್ತಿಬಂದ ಮಹಾಪುರುಷರ ಮಾಲಿಕೆ
ಯಲ್ಲಿ ಧಾರವಾಡ ಶ್ರೀ ಮುರುಘಾಮಠದ ಶ್ರೀ ಮಹಾಂತಪ್ಪಗಳು ಒಂದು ದಿವ್ಯ
ತೇಜೋ ರತ್ನ ! ತ್ರಿವಿಧ ದಾಸೋಹಮೂರ್ತಿ ಶಿವಾನುಭವ ರಸಿಕಚಕ್ರಿ ಶ್ರೀ ಮೃತ್ಯುಂಜ
ಯಪ್ಪಗಳ ಪರಮ ಶಿಷ್ಯ ಶಿರೋಮಣಿಯಾಗಿ ವೈರಾಗ್ಯದ ಗಣಿಯಾಗಿ ಈ ನಾಡಿನ
ಸಾಂಸ್ಕೃತಿಕ, ಧಾರ್ಮಿಕ ಜೀವನದ ರಾಯಭಾರಿಯಾಗಿ ಕನ್ನಡಿಗರ ಕಣ್ಮಣಿಯಾಗಿ
ಸಾಂಸ್ಕೃತಿಕ, ಧಾರ್ಮಿಕ ಜೀವನದ ರಾಯಭಾರಿಯಾಗಿ ಕನ್ನಡಿಗರ ಕಣ್ಮಣಿಯಾಗಿ
ಶೋಭಿಸುತ್ತಿದ್ದಾರೆ. ಐವತ್ತೈದು ವರುಷ ನಿರಂತರ ಸಮಾಜ ಸೇವೆಯಲ್ಲಿಯೇ ಲಿಂಗ
ದೇವನನ್ನು ಕಾಣುತ್ತಿರುವ ಶ್ರೀಗಳು ಬಂದ ಭಕ್ತರ ಶರಣಾಮಯಿ ವಾತ್ಸಲ್ಯಮಯಿ
ಯಾಗಿ ಧರ್ಮದೇವತೆಯಾಗಿ ಮಂಗಳಮೂರ್ತಿಯಾಗಿ ಕಂಗೊಳಿಸುತ್ತಿದ್ದಾರೆ- ಸಮಸ್ತ
ನಾಡಿನ ಸಮಸ್ತ ಜನಾಂಗದ ಅತ್ಯಂತ ಅಚ್ಚುಮೆಚ್ಚಿನ ನೆಚ್ಚಿನ ಹೃದಯಪುರುಷರಾಗಿ
ಸಕಲರಿಗೂ ಸಂತೋಷವನ್ನುಂಟುಮಾಡುವ ಅದ್ಭುತ ಶಕ್ತಿಗಳಿಸಿಕೊಂಡಿರುವ ಶ್ರೀ
ಮಹಾಂತಪ್ಪಗಳು ಪರಶಿವನ ಅಪರಾವತಾರಿಗಳೇ ಸರಿ. ಶಿವನಿಗಿಂತ ಶಿವಶರಣರು
ಶ್ರೇಷ್ಠರು ಎಂಬ ಮಾತಿಗೆ ನಿಜನಿದರ್ಶನರಾಗಿ ಚೊಕ್ಕ ಚಿನ್ನದಂತಹ ನಿರ್ಮಲವಾದ
ಬದುಕು ಅವರದು. ಲಕ್ಷಕ್ಕೊಬ್ಬ ಭಕ್ತ ; ಕೋಟಿಗೊಬ್ಬ ಶರಣ ಎಂಬ ನುಡಿಮುತ್ತಿಗೆ
ಸಾಕಾರರೂಪವೇ ಅವರು. ಶ್ರೀಗಳವರ ಸಾಮೀಪ್ಯ ಪಡೆದವರೆಲ್ಲರೂ ಅವರ ಬಳಗಕ್ಕೆ
ಸೇರಿಹೋಗುತ್ತಾರೆ. ಅವರದು ಪರುಷ ದೃಷ್ಟಿ, ದಿವ್ಯ ದೃಷ್ಟಿ. ಒಮ್ಮೆ ಅವರ ದರ್ಶನ
ಮಾಡಿಕೊಂಡರೆ ಸಾಕು, ಮತ್ತೊಮ್ಮೆ ಮಗದೊಮ್ಮೆ ಇನ್ನೊಮ್ಮೆ ದರ್ಶನ ಪಡೆಯ
ಬೇಕೆಂಬ ಲವಲವಿಕೆಯುಂಟಾಗುತ್ತದೆ. ಅಲ್ಲಿ ಜಾತಿಯ ಪ್ರಶ್ನೆ ಎಂದಿಗೂ ಅಡ್ಡಬರುವು
ದಿಲ್ಲ. ಜಾತಿಯ ಜಾಲವನ್ನೇ ಹರಿದೊಗೆದ ಹರಿಕಾರರು ! ಅವರ ಮಹಾನ್ ಬದುಕು
ತೆರೆದಿಟ್ಟ ಪುಸ್ತಕದಂತಿದೆ. ಬೇಕಾದವರು ಬೇಕಾದಾಗ ಓದಿಕೊಳ್ಳಬಹುದು, ಬಾಳಿಗೆ
ಬೆಳಕು ಮೂಡಿಸಿಕೊಳ್ಳಬಹುದು. ಇಂದಿನದು ವೈಚಾರಿಕಯುಗ, ವೈಜ್ಞಾನಿಕಯುಗ
ಎಲ್ಲವನ್ನೂ ವರೆಗೆಹಚ್ಚಿ ತಿಕ್ಕಿ ನೋಡುವ ಕಾಲ. ಇಂತಹ ಸಂದರ್ಭದಲ್ಲಿಯೂ ವೀರ
ಶೈವ ಧರ್ಮ, ಸಂಸ್ಕೃತಿ, ತತ್ತ್ವಜ್ಞಾನಗಳ ರಸಗಟ್ಟಿಯಾಗಿ ಸ್ವಧರ್ಮದಲ್ಲಿ ನಿಷ್ಠೆ, ಪರ
ಧರ್ಮದಲ್ಲಿ ಸಹಿಷ್ಣುಗಳಾಗಿ ವೀರಶೈವಧರ್ಮದ ವಿಜಯಪತಾಕೆಯನ್ನು ಎತ್ತಿ ಹಿಡಿದ
ಧೀಮಂತರು, ಹೃದಯ ಶ್ರೀಮಂತರು.

ಅತ್ಯಂತ ಸರಳ ನಿರಾಡಂಬರ ನಿಷ್ಕಲ್ಮಷ ಜೀವನದಿಂದ ಮಠಾಧಿಪತಿಗಳಿಗೆ, ಅನು
ಕರಣೀಯ ಆದರ್ಶ ಮಹಾಮಾರ್ಗವನ್ನು ತಮ್ಮ ನಡೆ-ನುಡಿ ಆಚಾರ-ವಿಚಾರಗಳಿಂದಲೇ

ಎತ್ತಿ ಹಿಡಿದ ಶ್ರೀ ಮಹಾಂತಪ್ಪಗಳು ಗುರುಶಿಷ್ಯರ ಜೋಡಿ ಹೇಗಿರಬೇಕೆಂಬುದಕ್ಕೆ ಉಜ್ವಲ ಉದಾಹರಣೆಯಾಗಿದ್ದಾರೆ. ಶ್ರೀ ಮೃತ್ಯುಂಜಯಪ್ಪಗಳ ನೆರಳಾಗಿ ಬಾಳಿ ಬೆಳಗುತ್ತಿರುವ ಶ್ರೀ ಮಹಾಂತಪ್ಪಗಳು ಶ್ರೀ ಮುರುಘಾಮಠದ ವಿನೂತನ ನಿರ್ಮಾಣ ಕಾರ್ಯದಲ್ಲಿ ಅತ್ಯಂತ ಮಹತ್ವದ ಪಾತ್ರವನ್ನಾಡಿದ್ದಾರೆ. ಇಂದು ಅದೊಂದು ಅಭಿನವ ಕಲ್ಯಾಣನಗರವಾಗಿದೆ; ಶಿವಾನುಭವ ಮಂಟಪ ರಚನೆಗೊಂಡಿದೆ ೧೨೬ ಖೋಲೆಗಳುಳ್ಳ ಪ್ರಸಾದ ನಿಲಯದ ಭವ್ಯ ಕಟ್ಟಡ ಪ್ರೇಕ್ಷಕರ ಮನಸ್ಸನ್ನು ಕೂಡಲೇ ಆಕರ್ಷಿಸುವಂತಿದೆ. ಶ್ರೀಮಠದ ಕೀರ್ತಿಪತಾಕೆಯನ್ನು ಜಗತ್ತಿನ ತುಂಬ ಹರಡಿದ ಕಾರಣಪುರುಷರು, ಕಾರಣಿಕ ಪುರುಷರು. ಸೇವಾಧರ್ಮವೆಂಬುದು ಬಹಳ ರಹಸ್ಯಪೂರ್ಣವಾದುದು, ಯೋಗಿಗಳಿಗೂ ತಿಳಿಯಲಿಕ್ಕಾಗುವುದಿಲ್ಲ.

ಶ್ರೀ ಮಹಾಂತಪ್ಪಗಳು ಯಾವ ಕಾಲೇಜು ಕಟ್ಟೆ ಹತ್ತಿದವರಲ್ಲ, ವ್ಯವಸ್ಥಿತ ಅಧ್ಯಯನ ಮಾಡಿದವರಲ್ಲ. ಶ್ರೀ ಮೃತ್ಯುಂಜಯಪ್ಪಗಳ ಸೇವೆಯಿಂದಲೇ ಇಂತಹ ಅದ್ಭುತ ಶಕ್ತಿಗಳಿಸಿಕೊಂಡಿರುವುದು ಐತಿಹಾಸಿಕ ಸತ್ಯ. ಸೇವಾಬುದ್ಧಿಯನ್ನು ಅರಳಿಸಿಕೊಂಡವರ ಮುಂದೆ ಎಂಥ ಬುದ್ಧಿವಂತರೂ ಕೂಡ ತಲೆತಗ್ಗಿಸಬೇಕಾಗುತ್ತದೆ ಅಪ್ಪಗಳು ಬಹಳ ಮಾತನಾಡುವವರಲ್ಲ. ಮೌನದಲ್ಲಿಯೇ ಮಹಾವೀಣೆ ಮಿಡಿಯುವವರು. ಸಮಯೋಚಿತ ಸಂದರ್ಭಾನುಸಾರ ಹಿತಮಿತವಾಗಿ ನುಡಿದರೆ ಲಿಂಗಮೆಚ್ಚಿ ಅಹುದಹುದು ಎನ್ನುವಂತೆ ಅಪ್ಪಣೆ ಕೊಡುತ್ತಾರೆ. ಭಕ್ತರೆಲ್ಲ ಭಕ್ತಿ ವಿಶ್ವಾಸ ಶ್ರದ್ಧೆ ನಿಷ್ಠೆಯಿಂದ ಕೇಳುತ್ತಾರೆ ಆ ದೃಶ್ಯ ನಿಜವಾಗಿಯೂ ರೋಮಾಂಚಕಾರಿ.

ದಿನಬೆಳಗಾದರೆ ಧರ್ಮದ ಅಧೋಗತಿಯಾಗುತ್ತಿರುವ ಈ ಸಂದಿಗ್ಧ ದುರ್ದರ ಸಂಕಟಸಮಯದಲ್ಲಿ ಮಾನವೀಯ ಮೌಲ್ಯಗಳೇ ಕುಸಿದುಹೋಗುತ್ತಿರುವ ಈ ಸಂದರ್ಭದಲ್ಲಿ ನಿರಾಶೆಯಲ್ಲಿಯೇ ಆಶಾಜ್ಯೋತಿಯನ್ನು ಹೊತ್ತಿಸಿದ್ದಾರೆ, ಧರ್ಮದ ನಂದಾದೀವಿಗೆಯನ್ನು ಬೆಳಗಿಸುತ್ತಿದ್ದಾರೆ. ಕರುಣಾಳುವಾಗಿ ಕೈಹಿಡಿದು ಮುನ್ನಡಿಸುತ್ತಿದ್ದಾರೆ. ಧರ್ಮತತ್ತ್ವಗಳ ಪ್ರಸಾರಕ್ಕಾಗಿ ಒಂದರ ಮೇಲೊಂದು ಗ್ರಂಥವನ್ನು ಬಾಲಲೀಲಾ ಮಹಾಂತ ಶಿವಯೋಗಿಗಳ ಗ್ರಂಥಮಾಲೆಯ ಮುಖಾಂತರ ಅರಳಿಸುತ್ತಿದ್ದಾರೆ. ಪ್ರತಿವರುಷ ಶಿವಾನುಭವ ಪರೀಕ್ಷೆಗಳನ್ನು ಶಿವಾನುಭವ ತರಬೇತಿವರ್ಗವನ್ನು ಸಂಘಟಿಸುತ್ತಿದ್ದಾರೆ. ಹಳ್ಳಿಗೆ ಏಕರಾತ್ರಿ ಪಟ್ಟಣಕ್ಕೆ ಪಂಚರಾತ್ರಿಯಂತೆ ವಸಂತಮಾಸದ ಸುಳಿಗಾಳಿಯಂತೆ ನಾಡಿನಾದ್ಯಂತ ಸಂಚರಿಸಿ ಧರ್ಮಜಾಗ್ರತೆ ಮಾಡುತ್ತಿದ್ದಾರೆ. ವೀರಶೈವ ಧರ್ಮ ನಿಜವಾಗಿಯೂ ಜನತಾಧರ್ಮ ಹೃದಯ ಪ್ರಧಾನ ಧರ್ಮ, ಆಚಾರ ಪ್ರಧಾನ ಧರ್ಮ, ಅಂತೆಯೇ ಅದು ವಿಶ್ವಧರ್ಮ. ಈ ಧರ್ಮ ಸಂಸ್ಕೃತಿ ಉನ್ನತವಾದುದು, ಉದಾತ್ತವಾದುದು ಈ ಮಾತಿಗೆ ಸಾಕ್ಷಿಯಾಗಿ ಶ್ರೀ ಮಹಾಂತಪ್ಪಗಳು ನಮ್ಮ ಮಧ್ಯೆ ಇದ್ದಾರೆ ಅವರು ನೂರು ವರುಷಕಾಲ ನಮ್ಮ ಮಧ್ಯೆ ಬಾಳಲೆಂದು ಹಾರೈಸುತ್ತೇವೆ.



# ಮರಳಿ ಬಂದ ಸೌಭಾಗ್ಯ

—ಶ್ರೀಮತಿ ಬಿ. ಎಸ್. ಜಯಾಶಂಕರ್

ಇಲ್ಲಿಯವರೆಗೆ ....................

ಮೋಹನ್ ಮಡದಿಯನ್ನು ಮನೆದುಂಬಿಸಿದ ಕೆಲವು ದಿನಗಳು ಅಮೃತ ಗಳಿಗೆಗಳಾಗಿ ಉರುಳಿದುವು. ಒಂದು ಸಂಜೆ ಚಾಮುಂಡಿ ಬೆಟ್ಟದ ಪ್ರಕೃತಿ ರಮಣೀಯತೆಯ ಮಡಿಲಲ್ಲಿ ಕಂಡ ಭಾವೀಜೀವನದ ಸುಂದರ ಸ್ವಪ್ನವನ್ನು ಮೆಲಕು ಹಾಕುತ್ತಾ ದೇವಿ ಆಶೀರ್ವಾದ ಪಡೆದು ಹಿಂದಿರುಗಿದರು. ಮೋಹನನಿಗೆ ಬಂದ ಕರ್ತವ್ಯದ ಕರೆ ಅರೆ ನಿಮಿಷದಲ್ಲಿ ಬರಸಿಡಿಲೆರಗಿದ ಅನುಭವ ತಂದಿತು ಉಷೆಗೆ. ವ್ಯವಸ್ಥಿ ಸ್ವಾತಿಕ ಜೀವಿ ಚಂದ್ರಪ್ಪನವರು ಸೊಸೆ ಉಷೆಯ ಭವಿಷ್ಯದ ಬಗ್ಗೆ ... ಮಾವನವರ ಆಸೆ ಪೂರೈಕೆಗಾಗಿ ಅಣ್ಣ ಸುಧೀರನನ್ನು ಮಾಡಿದರು. ಉಷೆಯೂ ಹಣ್ಣುಕಾಯಿ ತರಲು ಪೇಟೆಗೆ ಕಳುಹಿಸಿದಳು...............

ಗಾಡ್ರೇಜ್ ಬೀರು ತೆಗೆದು ಚಂದ್ರಪ್ಪನವರು, ಒಂದು ಸಣ್ಣ ಪೆಟ್ಟಿಗೆಯನ್ನು ಹೊರಗೆಳೆದರು. ಅದರಲ್ಲಿದ್ದ ಒಡವೆಗಳನ್ನು ಒಂದೊಂದಾಗಿ ತೆಗೆದು ಮತ್ತೆ ಅದರಲ್ಲೇ ಹಾಕಿದರು. ಸ್ವರ್ಗಸ್ಥರಾದ ತಮ್ಮ ಪತ್ನಿಯ ಆಭರಣಗಳು ಅವಾಗಿದ್ದವು. ತಮ್ಮ ಸೊಸೆಗೆ ಎಲ್ಲವನ್ನೂ ಕಾದಿರಿಸಿದ್ದರು. ಉಷಳನ್ನು ಕರೆದು ಈ ದಿನ ಈ ಒಡವೆಗಳನ್ನು ಧರಿಸಿಕೊಂಡು ಮದುವೆಯ ದಿನ ಉಟ್ಟ ಸೀರೆಯನ್ನು ಈ ದಿನವೂ ಧರಿಸಿ ಬಾರಮ್ಮಾ, ನನ್ನ ಮನೆಯ ಭಾಗ್ಯಲಕ್ಷ್ಮಿಯನ್ನು ನಾನು ಕಣ್ತುಂಬಾ ನೋಡಬೇಕು, ಎಂದು ಒಡವೆಯ ಪೆಟ್ಟಿಗೆಯನ್ನು ಉಷಳ ಕೈಗೆ ಕೊಟ್ಟರು.

ಪತಿಯು ಹೋಗುವಾಗ ಹೇಳಿದ ಮಾತು ಅವಳಿಗೆ ಜ್ಞಾಪಕಕ್ಕೆ ಬಂತು, 'ತಂದೆಯವರ ಯೋಗಕ್ಷೇಮ ನಿನ್ನ ಮೇಲೆ ಹಾಕಿರುವೆ' ಎಂದಿದ್ದ ಮೋಹನ ತನ್ನ ಮನಸ್ಸಿಗೆ ಎಷ್ಟೇ ನೋವಾಗಿದ್ದರೂ, ಮಾವನವರ ಈ ಸಣ್ಣ ಕೋರಿಕೆಯನ್ನು ಈಡೇರಿಸಲೇ ಬೇಕಿತ್ತು. ತನ್ನ ಪತಿಯ ಫೋಟೋವನ್ನು ಒಮ್ಮೆ ನೋಡಿದಳು. 'ನಿಮ್ಮ ಇಷ್ಟದಂತೆಯೇ ಆಗಲಿ ಪೂಜೆಗೆ ಅಣಿಮಾಡಿದ್ದೇನೆ, ನೀರು ಕಾದಿದೆ ಸ್ನಾನಮಾಡಿ ಬನ್ನಿ', ಎಂದು ಮಾವನವರನ್ನು ಎಬ್ಬಿಸಿದಳು. ಮಾವನವರು ಕೊಟ್ಟ ಅತ್ತೆಯ ಕೆಂಪಿನ ಆಭರಣಗಳನ್ನು ಹಾಕಿಕೊಂಡಳು. ಧಾರೆಯ ದಿನ ಉಟ್ಟಿದ್ದ ಕೆಂಪು ರೇಷ್ಮೆ

ಸೀರೆಯನ್ನುಟ್ಟು ಕೆನ್ನೆಯ ತುಂಬಾ ಹರಿಸಿನ, ಹಣೆಯಲ್ಲಿ ದುಂಡಗೆ ಹೊಳೆಯುತ್ತಿದ್ದ ಕುಂಕುಮ, ಮುಡಿಯಲ್ಲಿ ಮಲ್ಲಿಗೆಯ ದಂಡೆಯನ್ನು ಮುಡಿದು ಕಾಲಿಗೆರಗಿದ ಸೊಸೆಯನ್ನು ನೋಡಿ ಅವರಿಗೆ ಸಂತಸವಾಯಿತು. ಆತ್ಮಕ್ಕೆ ಅಪೂರ್ವ ಶಾಂತಿ ಲಭಿಸಿತ್ತು. ಅದು ಕ್ಷಣಮಾತ್ರ, ತಮ್ಮ ಮಗನನ್ನು ನೆನೆಸಿಕೊಂಡು ನೋವಿನಿಂದ ಅವರ ಮುಖ ಬಾಡಿತು. ಅಕ್ಕ ಪಕ್ಕದ ಹಿರಿಯ ಮುತ್ತೈದೆಯರನ್ನು ಕರೆದು ಹೂ ವೀಳ್ಯವನ್ನಿತ್ತು ಸತ್ಕರಿಸಿದಳು. ಲಕ್ಷ್ಮಿಯಂತಿದ್ದ ಅವಳನ್ನು ಹರಸಿ ತಮ್ಮ ಮನೆಗಳಿಗೆ ಹೋದರು. ಅಂದು ಹೆಚ್ಚಾಗಿ ಊಟಮಾಡಿದ ಚಂದ್ರಪ್ಪನವರು ಸೊಸೆಯನ್ನು ಕರೆದು ಬೀಗದಕೀ ಗೊಂಚಲನ್ನು ಕೊಟ್ಟು, ಇನ್ನು ಮೇಲೆ ಎಲ್ಲಾ ಜವಾಬ್ದಾರಿಯನ್ನು ನಿನ್ನ ಮೇಲೆ ಹೊರಿಸಿರುವೆ, 'ಚಿಕ್ಕವಳಾದರೂ ಇದನ್ನೆಲ್ಲಾ ನೋಡಿಕೊಂಡು ನಮ್ಮ ಮನೆಯ ಕೀರ್ತಿಯನ್ನು ಕಾಪಾಡುವ ಭಾರ ನಿನ್ನದು ತಾಯಿ', ಎಂದರು. ಉಷೆ ಮಲಗಲು ಹೊರಟ ಅವರನ್ನು ನೋಡಿ ಇಂದೇಕೆ ಮಾವನವರ ವರ್ತನೆ ಹೀಗಿದೆ ಎಂದುಕೊಂಡಳು. ತಾಯಿಯ ಬಲವಂತಕ್ಕೆ ಊಟದಶಾಸ್ತ್ರ ಮುಗಿಸಿ ಉಳಿದ ಕೆಲಸ ಮಾಡತೊಡಗಿದಳು. ಮಧ್ಯಾಹ್ನ ಕಾಫಿಮಾಡಿ ಚಂದ್ರಪ್ಪನವರ ಕೋಣೆಗೆ ತೆಗೆದುಕೊಂಡು ಹೋದಳು. ಕೈಯಲ್ಲಿ ಭಗವದ್ಗೀತೆ ಇತ್ತು. ಆದರೆ ಅವರ ಪ್ರಾಣಪಕ್ಷಿ ದೇವರ ಬಳಿ ಸೇರಿತ್ತು. ಎಷ್ಟು ಹೊತ್ತಾದರೂ ಏಳಲೇ ಇಲ್ಲವಲ್ಲ ಎಂದು 'ಕಾಫಿ ಆರಿ ಹೋಗುತ್ತೆ ಏಳಿ', ಎಂದಳು ಆದರೆ ಸದ್ದಿಲ್ಲ. ಅಲುಗಾಡಿಸಿದಳು. ಕೈ ತಣ್ಣಗಾಗಿತ್ತು ಚಿಟ್ಟನೆ ಚೀರಿದಳು, 'ಅಣ್ಣಾ, ಬೇಗ ಬಾ, ಮಾವನವರಿಗೆ ಏನೋ ಆಗಿದೆ,' ಎಂದು ಕೂಗಲು ತಾಯಿಮಗ ಇಬ್ಬರು ಓಡಿಬಂದರು.

ನೋಡುವುದೇನು ?, ಭೀಷ್ಮನಂತೆ 'ಇಚ್ಛಾಮರಣಿ'ಯಾಗಿ ದೇವರ ಪಾದ ಸೇರಿದರು, ಚಂದ್ರಪ್ಪನವರು. ಏನು ಮಾಡುವುದೆಂದು ತಲೆಯಮೇಲೆ ಕೈ ಹೊತ್ತು ಕುಳಿತನು ಸುಧೀರ್. ಉಷಾಳ ಗೋಳಂತೂ ಹೇಳತೀರದು. ಸುಧೀರನಿಗೆ ಮೈಸೂರಿನಲ್ಲಿ ಪರಿಚಯದವರಿರಲಿಲ್ಲ, ವಿಶ್ವನಾಥ್ ರವರನ್ನು ಕಂಡು ವಿಷಯವನ್ನು ತಿಳಿಸಲು ಗೆಳೆಯನ ಅಕಾಲ ಸಾವಿಗೆ ನೊಂದುಕೊಂಡರು. ಚಂದ್ರಪ್ಪನವರ ಒಬ್ಬನೇ ಮಗ ಮೋಹನ ರಣರಂಗದಲ್ಲಿದ್ದ, ಈಚೆಗೆ ಅವನೆಲ್ಲಿದ್ದಾನೋ ಅದೂ ಗೊತ್ತಿಲ್ಲ. ಈಗೇನು ಮಾಡೋಣ ? ಅವನಿಗೆ ತಿಳಿಸಿದರೂ ಸಕಾಲಕ್ಕೆ ತಲುಪುವುದೇ ? ಎಂದು ಯೋಚಿಸಿ ವಿಶ್ವನಾಥಯ್ಯ ಹೇಳಿದರು, 'ನೋಡಿ ಸುಧೀರ್, ಯೋಚಿಸುತ್ತಾ ಕೊಡುವ ಸಮಯವಲ್ಲ ಹಿಂದಿನ ಜನ್ಮದಲ್ಲಿ ನೀವೇ ಇವರ ಮಗನಾಗಿದ್ದಿರಬೇಕು, ನೀವೇ ನಿಂತು ಅಂತಿಮ ಕಾರ್ಯವನ್ನು ನೆರವೇರಿಸಿ, ಎಲ್ಲಾ ವಿಧದ ಸಹಕಾರ ನಮ್ಮದಿರಲಿ' ಎಂದು ಅನುಕಂಪದಿಂದ ನುಡಿದರು. ಅಂತೆಯೇ ಅವರ ನೆರವಿನಿಂದ ಎಲ್ಲ ಕೆಲಸಗಳನ್ನು ಸಾಂಗವಾಗಿ ನೆರವೇರಿಸಿದ ಸುಧೀರ್.

ತಂಗಿಯನ್ನು ನೋಡಿ ಹೋಗಲು ಬಂದವನು ಇಲ್ಲಿ ಮೋಹನನ ತಂದೆಯ ಅಂತಿಮ ಕಾರ್ಯವನ್ನು ನಡೆಸಬೇಕಾಯಿತು. ವಿಧಿಯ ಆಟ ಏನು ಹೇಳುವುದು ?



ಮನೆಯಲ್ಲಿ ಎಲ್ಲರೂ ದುಃಖತಪ್ತರಾಗಿ ಮೋಹನನ ಪರಿಸ್ಥಿತಿ ಏನಾಗಿದೆಯೋ ಇಲ್ಲಿ ನೋಡಿದರೆ ಈ ಸ್ಥಿತಿ ಎದುರಿಸಬೇಕಾಯಿತು. ಇನ್ನು ತಂಗಿ ಉಷಾಳನ್ನು ಒಂಟಿಯಾಗಿ ಬಿಟ್ಟು ಹೋಗುವುದು ಹೇಗೆ ? ಎಂದು ಮತ್ತೆ 15ದಿನ ರಜೆಗೆ ಬರೆದು ತನ್ನ ಮುಖ್ಯೋಪಾಧ್ಯಾಯರಿಗೆ ಪೋಸ್ಟ್ ಮಾಡಿದ.

ಅತ್ತ ಕಾಶ್ಮೀರದ ಗಡಿಯಲ್ಲಿ ಭಾರತಕ್ಕೂ ಪಾಕಿಸ್ತನಕ್ಕೂ ಯುದ್ಧ ಭರದಿಂದ ಸಾಗಿತ್ತು. ಟ್ಯಾಂಕ್ ಪಡೆಯ ನಾಯಕನಾಗಿ ಹೋರಾಡುತ್ತಿದ್ದ ಮೋಹನ. ನಾಡಿನಾದ್ಯಂತ ತುರ್ತುಪರಿಸ್ಥಿತಿ ಘೋಷಿಸಿತ್ತು. ಜನರೆಲ್ಲಾ ಪೇಪರ್‌ಗಳನ್ನು ಹಿಡಿದು ರೇಡಿಯೋಗಳಿಗೆ ಕಿವಿಯೊಡ್ಡಿ ಕುಳಿತಿರುತ್ತಿದ್ದರು. ನಮ್ಮ ಧೀರ ಯೋಧರು ಜಯಭೇರಿ ಹೊಡೆಯುತ್ತಾ ಸಾಗಿದ್ದರು. ಪೂರ್ವ ಗಡಿಯಲ್ಲಿ ತನ್ನ ಟ್ಯಾಂಕ್ ಪಡೆಯನ್ನು ನಡೆಸುತ್ತಾ ಅನೇಕ ಠಾಣೆಗಳನ್ನು ವಶಪಡಿಸಿಕೊಂಡಿದ್ದ ತನ್ನ ಸೈನಿಕರನ್ನು ಹುರಿದುಂಬಿಸುತ್ತಾ ಯುದ್ಧದಲ್ಲಿ ವೀರ ಅಭಿಮನ್ಯುವಿನಂತೆ ಶತೃಗಳನ್ನು ಹಿಮ್ಮೆಟ್ಟಿಸಿ ಹೋರಾಡುತ್ತಿದ್ದ ಮೋಹನ ಮುಂದಿರುವ ಠಾಣೆಯನ್ನು ವಶಪಡಿಸಿಕೊಂಡರೆ ಆ ಭಾಗದಲ್ಲಿ ಶತೃವಿನ ಬಲ ನಿರ್ನಾಮವಾಗುತ್ತಿತ್ತು. ಅದಕ್ಕೋಸ್ಕರ ಪಾಕಿಸ್ತಾನಿ ಸೈನಿಕರು ಅಧಿಕಾರಿಗಳು ತಮ್ಮ ಬಲವನ್ನೆಲ್ಲಾ ಉಪಯೋಗಿಸಿ ಕುಟಿಲ ಯುದ್ಧದಿಂದಲಾದರೂ ವೈರಿಯನ್ನು ಎದುರಿಸಲು ಸಿದ್ಧರಾಗಿದ್ದರು. ಟ್ಯಾಂಕ್ ಪಡೆಯನ್ನು ನಡೆಸುತ್ತಾ ಬಂದ ಮೋಹನ, ಎದುರಿನಲ್ಲಿದ್ದ ಸೇತುವೆಯನ್ನು ಶತೃಗಳು ನಾಶಪಡಿಸಿದ್ದರು. ತಾತ್ಕಾಲಿಕವಾಗಿ ನಮ್ಮ ಎಂಜಿನಿಯರುಗಳು ಅದನ್ನು ಸರಿಪಡಿಸಬೇಕಾಗಿತ್ತು, ಅಷ್ಟರಲ್ಲಿ ಕತ್ತಲಾದ್ದರಿಂದ ಅಲ್ಲಲ್ಲಿ ಕಂದಕಗಳನ್ನು ತೋಡಿಕೊಂಡು ಪಾಕಿಸ್ತಾನಿಧೂರ್ತರು ಅಡಗಿಕೊಂಡಿದ್ದರು. ಒಮ್ಮೆಲೆ ಸುತ್ತುವರಿದರು, ಆದರೂ ಎದೆಗೆಡದ ನಮ್ಮ ಯೋಧರು ಹೋರಾಡುತ್ತಿದ್ದರು. ಕ್ಯಾಪ್ಟನ್ ಮೋಹನನ ಶೌರ್ಯ ಹೇಳಲಸದಳವಾಗಿತ್ತು. ವೈರಿಗಳಿಗೆ ಕಾಲಯಮನಂತೆ ಕಾಣುತ್ತಿದ್ದ ಇವನೊಬ್ಬನನ್ನು ಸದೆಬಡಿದರೆ ಇವನ ಸೈನಿಕರ ಬಲ ಕುಗ್ಗುವುದು, ಆಗ ನಮಗೆ ಜಯದೊರಕುವುದರಲ್ಲಿ ಸಂಶಯವಿಲ್ಲ ಎಂದು ಒಟ್ಟಿಗೆ 15 ಜನ ಮೆಶೀನ್ ಗನ್‌ಗಳನ್ನು ಹಿಡಿದು ಮೋಹನನನ್ನು ಎದುರಿಸಿದರೂ ಹೆದರದೆ ತನ್ನ ಸೈನಿಕರೊಂದಿಗೆ ಶತೃಗಳಿಗೆ ಭಾರಿ ಪರಾಭವವನ್ನುಂಟುಮಾಡಿದ.

ಅಷ್ಟರಲ್ಲಿ ಶತ್ರುಗಳು ಹೊಡೆದ ಗುಂಡು ಮೋಹನನ ಎದೆ ತಾಕಿತು, ಮತ್ತೊಂದು ಬಲ ತೋಳಿಗೆ ಬಿತ್ತು. ಸೈನಿಕರು ಹತಾಶರಾಗಿ ಇವನ ನೆರವಿಗೆ ಧಾವಿಸಿ ಬಂದರು. ಪರಿಸ್ಥಿತಿ ಭೀಕರವಾಗಿತ್ತು, ಅವನ ಕೈಕೆಳಗಿನ ಸೈನಿಕರಿಗೆ ಕೂಗಿ ಹೇಳಿದ, 'ಸ್ನೇಹಿತರೆ, ನನ್ನ ಸಾವಿಗೆ ಹೆದರಬೇಡಿ, ನನ್ನೊಬ್ಬನ ಪ್ರಾಣಕ್ಕೆ ಹತ್ತತ್ತು ಮಂದಿ ಶತ್ರುಗಳನ್ನು ಒಬ್ಬೊಬ್ಬರೂ ಉರುಳಿಸಿ, ಆಗಲೇ ನನ್ನ ಆತ್ಮಕ್ಕೆ ಶಾಂತಿ, ಭಾರತಮಾತೆಗೆ ಕೀರ್ತಿತನ್ನಿ, ಯುದ್ಧದಲ್ಲಿ ಸತ್ತರೆ ವೀರನಿಗೆ ಸ್ವರ್ಗ, ಹೇಡಿ ನನ್ನ ಬಗ್ಗೆ ಯಾರೂ ಚಿಂತಿಸಬೇಡಿ,

## ಇಲ್ಲಿದೆ ಒಂದು ಆಲಯ

ಜೀವನದುದ್ದಕ್ಕೂ ಏಕಾಕಿಯಾಗಿಯೇ ಉಳಿದ ನಿಮಗೆ ಈ ಇಳಿವಯಸ್ಸಿನಲ್ಲಿ ಗತಿ ಯಾರು ?

ನಿಮ್ಮ ಖರ್ಚಿನಲ್ಲಿ ನೀವೇ ನಡೆಸಿಕೊಂಡು ಹೋಗುವಂತೆ, ಎಂದರೆ ಯಾವ ಬಗೆಯ ಮೋಸಕ್ಕೂ ಅವಕಾಶವಿರದಂತೆ ನಿಮಗೆ ನೆರವಾಗಲೂ ಪ್ರತಿಷ್ಠಾನ ಸದಾ ಸಿದ್ಧ. ನಿಮ್ಮ ದೈಹಿಕ-ಮಾನಸಿಕ ನೆಮ್ಮದಿಗಾಗಿ ನಿಮ್ಮ "ಪ್ರಾಜ್ಞಾಲಯ" ಸ್ತ್ರೀ ಪುರುಷರಾದಿಯಾಗಿ ನಿಮ್ಮೆಲ್ಲರನ್ನೂ ಕೈಬೀಸಿ ಕರೆಯುತ್ತಿದೆ.... "ಬನ್ನಿ—ಬನ್ನಿರಿ" .... ಎಂದು.

ಶುದ್ಧ ಸಾತ್ವಿಕ ಸಸ್ಯಾಹಾರಗಳಾದ, ದೈವಪ್ರಜ್ಞೆಯುಳ್ಳ ಆತ್ಮಶಕ್ತಿ ಪಡೆದ –ಪಡೆಯ ಬಯಸುವ ವಯಸ್ಸು ಅರವತ್ತರಿಂದ ಎಪ್ಪತ್ತೈದರೊಳಗಿನ ವಯೋವೃದ್ಧ ಜ್ಞಾನವೃದ್ಧರಿಗಾಗಿ ಸ್ವಾಗತ ಬಯಸಿ ನಿಂತಿದೆ ನಿಮ್ಮ "ಪ್ರಾಜ್ಞಾಲಯ", ಬರೆಯಿರಿ ಈ ಕೆಳಕಂಡ ವಿಳಾಸಕ್ಕೆ.

"ಜೀವನ-ಜ್ಯೋತಿ" ಮಾನವತಾ ಪ್ರತಿಷ್ಠಾನ
ಶ್ರೀ ರಾಘವೇಂದ್ರ ನಿಲಯ ಗೋಪಾಳಪುರ
ಮಾಳಮಡ್ಡಿ ಧಾರವಾಡ–580007

---

ಗಳಂತೆ ಹಿಂದೆಗೆಯಬೇಡಿ, ವೀರರಂತೆ ಹೋರಾಡಿ, ಇನ್ನು ನನ್ನ ಕತೆ ಮುಗಿದಂತೆಯೇ, ಸ್ವಲ್ಪ ಹೊತ್ತಿಗೆಲ್ಲಾ ನಮ್ಮ ವಾಯುಪಡೆ ಬರುತ್ತದೆ, ಆಗ ನಮಗೇ ಖಂಡಿತ ಜಯ, ಹೋಗಿ ವೀರಾವೇಶದಿಂದ ಹೋರಾಡಿ, ನಿಮಗೆಲ್ಲರಿಗೂ ನನ್ನ ಪ್ರಣಾಮಗಳು ....' ಎನ್ನುತ್ತಿದ್ದಂತೆಯೇ ಕುಸಿದುಬಿದ್ದ. ಸೈನಿಕರೆಲ್ಲಾ ವೀರಾವೇಶದಿಂದ ಹರಹರಮಹಾದೇವ.... ಎನ್ನುತ್ತಾ ಶತ್ರುಗಳ ಗುಂಡಿನೇಟಿಗೆ ಹೆದರದೆ ಕೆಚ್ಚೆದೆಯಿಂದ ಹೋರಾಡಿದರು. ಆ ವೇಳೆಗೆ ವಾಯುಪಡೆ ಸಹಾಯಕ್ಕೆ ಬರಲು ಶತ್ರುಗಳು ಎಲ್ಲೆಂದರಲ್ಲಿ ಶಸ್ತ್ರಗಳನ್ನು ಒಗೆದು ತಮ್ಮ ಪ್ರಾಣಗಳನ್ನು ರಕ್ಷಿಸಿಕೊಳ್ಳಲು ಹೋರಾಡಿದರು ಆ ಹೇಡಿಗಳು, ವಿಷಯ ತಿಳಿದ ಮೇಲಾಧಿಕಾರಿ, ಕಮ್ಯಾಂಡರ್ ಅಜಿತ್‌ಸಿಂಗ್ ತನ್ನ ಗೆಳೆಯನಿಗೆ ಮಿಲಿಟರಿ ಗೌರವದೊಡನೆ ಅಂತಿಮ ಕಾರ್ಯವನ್ನು ಪೂರೈಸಿದ. ಒಬ್ಬ ಅಜೇಯ ವೀರಪುತ್ರನನ್ನು ಭಾರತಾಂಬೆ ಕಳೆದುಕೊಂಡಿದ್ದಳು. ಭೂದಂಡನಾಯಕ ಜನರಲ್ ಮಾಣಿಕ್ ಷಾ ರವರು ಮೋಹನನ ಶೌರ್ಯವನ್ನು ಮನಸಾರೆ ಕೊಂಡಾಡಿ, ನಮ್ಮ ಸೈನ್ಯಬಲವು ಒಬ್ಬ ಧೀರ ಅಧಿಕಾರಿ ಮತ್ತು ಯೋಧನನ್ನು ಕಳೆದುಕೊಂಡಿತು, ಎಂದು ಸಂತಾಪವನ್ನು ಸೂಚಿಸಿದರು. ಅವನ ನಾಮಾಂಕಿತವಿದ್ದ ಉಡುಪು ಮತ್ತು ಫೋಟೋವನ್ನು ಮೈಸೂರಿನ ವಿಳಾಸಕ್ಕೆ ಕಳುಹಿಸಲಾಯಿತು.

(ಮುಂದುವರಿಯುವುದು)



## ಚಿಕಿತ್ಸಾರೂಪ ಸಲಹೆ

—ಡಾ॥ ಸಿ. ಅಶ್ವಥ್

**"ಶ್ರೀ ಸಿದ್ಧಗಂಗಾ ಮಾಸಿಕದ ಕರೆಗೆ ಓಗೊಟ್ಟು ಪ್ರಶ್ನೆಗಳನ್ನು ಕಳುಹಿಸಿರುವ ಸನ್ಮಾನ್ಯ ಮ. ಬ. ಚನ್ನಬಸಪ್ಪನವರಿಗೆ ಚಿಕಿತ್ಸಾರೂಪ ಸಲಹೆ—**

1) 54½ ವರ್ಷದ ನೀವು ಆರೋಗ್ಯವಾಗಿದ್ದು, ಮಲ, ಮೂತ್ರ ಪರೀಕ್ಷೆಗಳಲ್ಲಿ ಯಾವ ದೋಷವೂ ಇಲ್ಲದಿರುವುದು ಶ್ರೀ ಸಿದ್ಧಲಿಂಗೇಶ್ವರರ ಕೃಪಾಶೀರ್ವಾದ. ರಕ್ತಹೀನತೆ ಸರ್ವೇ ಸಾಮಾನ್ಯ. ರಕ್ತಹೀನತೆಗೆ ಕಬ್ಬಿಣಾಂಶದ ಕೊರತೆಯೇ ಪ್ರಮುಖ ಕಾರಣವೆನ್ನಬಹುದು, ಕಬ್ಬಿಣದ ಅಂಶವು ನಮ್ಮ ದಿನನಿತ್ಯದ ಆಹಾರವಾಗಿರುವ ರಾಗಿ ಮತ್ತು ಹಸಿರು ತರಕಾರಿಗಳಲ್ಲಿ ಹೇರಳವಾಗಿರುತ್ತದೆ. ಇವುಗಳನ್ನು ಯಥೇಚ್ಛವಾಗಿ ಉಪಯೋಗಿಸಿಯೂ ಸಹ ರಕ್ತಹೀನತೆ ಸರಿಯಾಗದಿದ್ದರೆ (ಮಾಕ್ರಾಫೋಲಿನ್–ಐರನ್) Macrafolin-Iron (Glaxo) ಒಂದು ಬಾರಿಗೆ ಒಂದು ಮಾತ್ರೆಯಂತೆ, ದಿನಕ್ಕೆ ಮೂರು ಸಲ ಆಹಾರ ಸೇವಿಸಿದ ನಂತರ ಮಾತ್ರೆ ನುಂಗಿ ನೀರು ಕುಡಿಯಬಹುದು. ಹೀಗೆ ಹತ್ತು ದಿನ (ಒಟ್ಟು ಮೂವತ್ತು ಮಾತ್ರೆ) ತೆಗೆದುಕೊಂಡರೆ ರಕ್ತಹೀನತೆ ಬಹಳಮಟ್ಟಿಗೆ ಸುಧಾರಿಸುತ್ತದೆ.

2) ವಯೋಧರ್ಮಕ್ಕನುಗುಣವಾಗಿ ಕ್ರಮೇಣ ದುರ್ಬಲವಾಗುತ್ತಿರಬಹುದು. ಅಥವಾ ರಕ್ತಹೀನತೆಯಿಂದ ದುರ್ಬಲವಾದಂತೆ ಕಾಣಬಹುದು. ಪ್ರತಿದಿನ ಲಘು ವ್ಯಾಯಾಮ ಅಥವಾ ವಾಯುವಿಹಾರ, ಸಮಯಕ್ಕೆ ಸರಿಯಾಗಿ ಆಹಾರ ಸೇವನೆ, ತರಕಾರಿ, ಹಾಲು, ಹಣ್ಣುಗಳು ನಿಮ್ಮ ಎಲ್ಲ ಸಮಸ್ಯೆಗಳನ್ನು ಬಗೆಹರಿಸುತ್ತವೆ.

3) ಕನ್ನಡಕವನ್ನು ಉಪಯೋಗಿಸಬಹುದು, ಹಲ್ಲುಗಳ ಬಲಹೀನತೆಗೆ, ಸಿಹಿ ಸ್ವಲ್ಪ ಕಡಿಮೆಮಾಡಿ. ಹಲ್ಲುಗಳನ್ನು ಪ್ರತಿಭಾರಿ ಆಹಾರ ಸೇವನೆಗೆ ಮುಂಚೆ ಮತ್ತು ಆಹಾರ ಸೇವನೆಯನಂತರ ಉಜ್ಜಿರಿ.

---

ಪರಿಜ್ಞಾನ ಕಾಲದವರ ನಾಲಗೆ ಒಂದು ಪರಶು (ಕೊಡಲಿ) ವಿವೇಕದಿಂದ ತೂಗಿ
ಆಡಿದ ಮಾತು ಅಮೃತಕ್ಕೆ ಸಮಾನ ಪೂರ್ವಾಪರ ಜ್ಞಾನವಿಲ್ಲದೆ ನಾಲಿಗೆ ಆಡಿ
ದಂತೆ ಜಾರಿ ಬಂದ ಮಾತು ವಿಷದಹಾವಿನ ಹಲ್ಲಿಗೆ ಸಮಾನ. ಆದ್ದ
ರಿಂದ ನಾಲಿಗೆಯ ನಿಗ್ರಹವು ಶ್ರೇಯಸ್ಸಿಗೆ ದಾರಿ.

—ಜಿ. ಪಿ. ರಾಜರತ್ನಮ್ಮ

( 9 ನೇ ಪುಟದಿಂದ )

ರಲ್ಲಿ ಹೇಳಿದಂತೆ ಯಾಂತ್ರಿಕವಾಗಿ ಆಚರಿಸಿದರೂ ಪ್ರಯೋಜನವಿಲ್ಲ. ಆ ಆಚರಣೆಯ ಉದ್ದೇಶವನ್ನು ಅರಿತು, ಅದರ ಕ್ರಮವನ್ನು ತಿಳಿದು ಮನಃಪೂರ್ವಕವಾಗಿ ನಡೆದರೆ ಅದರ ಉದ್ದೇಶ ಈಡೇರುತ್ತದೆ. ಆಚರಿಸುವಾತ ಆ ಸತ್ಫಲಕ್ಕೆ ಭಾಜನನಾಗುತ್ತಾನೆ.

ಪೂಜೆಯಲ್ಲಿ ಯಾಂತ್ರಿಕತೆ ತಲೆದೋರಿದರೆ ಪರಿಣಾಮ ಘೋರ. 'ಮಾಡಿ ಮಾಡಿಕೆಟ್ಟರು ಮನವಿಲ್ಲದೆ, ನೀಡಿನೀಡಿಕೆಟ್ಟರು ನಿಜವಿಲ್ಲದೆ' ಎಂಬಂತಾಗುತ್ತದೆ. ನಿರಾಳವಿಲ್ಲದೆ ಯಾವ ವ್ರತವನ್ನು ಆಚರಿಸಿದರೂ ನಿಷ್ಫಲ. ಕೋಪಿ ಮಜ್ಜನಕ್ಕೆರೆದರೆ ರಕ್ತದಧಾರೆ. ಅದಕ್ಕೇ 'ಸಜ್ಜನನಾಗಿ ಮಜ್ಜನಕ್ಕೆರೆಯಬೇಕು, ಶಾಂತನಾಗಿ ಪೂಜೆ ಮಾಡಬೇಕು' ಎಂದರು ಶರಣರು. ಹೊರಗಡೆ ದೇಹಕ್ಕೆ ವಿಭೂತಿ, ನಾಮ ಅಥವಾ ಮುದ್ರೆಗಳನ್ನು ಹಚ್ಚಿಕೊಂಡರೆ ಸಾಲದು. ಆ ಲಾಂಛನಗಳು ಮನಸ್ಸನ್ನು ಮಾಗಿಸುವ ಸಾಧನವಾಗಬೇಕು. ಹೊರಗೆ ಪೂಸಿಏನಯ್ಯ, ಒಳಗೆ ಶುದ್ಧವಾಗದನ್ನಕ್ಕ ; ಮಣಿಯ ಕಟ್ಟಿ ಏನಯ್ಯ ಮನ ಮುಟ್ಟದನ್ನಕ್ಕ ಎಂದು ಅವರು ಹೇಳಿದ್ದು ಇದಕ್ಕೇ.

ದಿವಸಕ್ಕೆ ಎರಡು ಅಥವಾ ಮೂರು ಸಲ ದೇವರಮನೆಯಲ್ಲಿ ಕುಳಿತು, ಶಾಸ್ತ್ರೋಕ್ತವಾಗಿ ಮಾಡುವ ಪೂಜೆ ಒಂದು. ಇದು ನಿಯತಕಾಲಿಕ ಪೂಜೆ, ಇನ್ನೊಂದು ಸಾರ್ವಕಾಲಿಕ ಪೂಜೆ ಎಂದಿದೆ. ತಾನು ಬದುಕಿ, ತನ್ನಂತೆಯೇ ಪರರನ್ನು ಬಗೆದು ಅವರನ್ನೂ ಬಾಳಗೊಡುವವನ ನಡೆ-ನುಡಿಗಳೆಲ್ಲವೂ ಪೂಜೆಯೇ. ನಾಲ್ಕುಜನಕ್ಕೆ ಸಂತೋಷವನ್ನುಂಟುಮಾಡುವ ಸತ್ಕಾರ್ಯವೂ ಕೂಡ ದೇವರ ಪೂಜೆಯೇ. 'ಸಂತೋಷ ಜನಯತೇ ತದೇವ ಈಶ್ವರಪೂಜನಂ' ಎಂಬ ಸೂಕ್ತಿ ಅದನ್ನೇ ಸಾರುತ್ತದೆ. ನಿಸ್ವಾರ್ಥಬುದ್ಧಿಯಿಂದ, ಸತ್ಯಶುದ್ಧನಾಗಿ ಮಾಡುವ ಕೆಲಸವೆಲ್ಲವೂ ಪೂಜೆಯೇ ಆಗಿಬಿಡುತ್ತದೆ. ಆದ್ದರಿಂದ ಪೂಜಿಸುವಾತ, ಪೂಜೆ ಸಾರ್ಥಕವಾಗಲು ಅರಿತು ಆಚರಿಸಬೇಕು. ಪೂಜೆ ಲೌಕಿಕ-ಪರಮಾರ್ಥಿಕಗಳ ರಸಸೇತುವೆ. ಆತ್ಮ-ಪರಮಾತ್ಮರ ಸಾಮರಸ್ಯದ ನೆಲಗಟ್ಟು ಎಂದು ತಿಳಿದಾಗ ಜೀವನದಲ್ಲಿ ಅದರ ಮಹತ್ವ ಅರಿವಾದೀತು. ಬಹಿರಂಗಪೂಜೆ ಅಂತರಂಗಪೂಜೆಗೆ ಅನುವು ಮಾಡಿಕೊಡಬೇಕು. ನಿಯತಕಾಲಿಕ ಪೂಜೆ ಸಾರ್ವಕಾಲಿಕಪೂಜೆಗೆ, ಪರಿಶುದ್ಧ ಜೀವನಕ್ಕೆ, ಎಡೆ ಮಾಡಿಕೊಡಬೇಕು. ವ್ಯಕ್ತಿಯ ಆತ್ಮವನ್ನು ಪರಿಶುದ್ಧಗೊಳಿಸಿ, ಆವನ ಲೌಕಿಕ ಬಾಳಿಗೆ ಶ್ರೇಯಸ್ಸನ್ನು, ಪಾರಮಾರ್ಥಿಕ ಜೀವನಕ್ಕೆ ಶ್ರೇಯಸ್ಸನ್ನುಂಟುಮಾಡುವ ಪೂಜೆಯೇ ನಿಜವಾದ ಪೂಜೆ, ಉಳಿದುದೆಲ್ಲಾ ಬರೀ 'ಪೂಜೆ'.

LICENCED TO POST WITHOUT PRE PAYMENT LICENCE NO. 3
Registered with the Registrar of News papers for India under
No. 17139/69
Siddaganga Monthly Magazine Siddaganga Mutt.
Reg No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.